# ಭಕ್ತ ಪುರಂದರದಾಸರು

## ನಾಟಿಕೆ



ಪ್ರಕಟನೆ

**ತಿರುಮಲ ತಿರುಪತಿ ದೇವಸ್ಥಾನಗಳು**

ತಿರುಪತಿ

BHAKTA PURANDARADASARU.
Nāṭaka.

by

K. APPANNACHARYA

T. T. D. Religious Publications Series No. 30

1986

Copies : 3,000

*Published by :*
Sri S. Lakshminarayana, I.A.S.,
Executive Officer,
Tirumala Tirupati Devasthanams,
Tirupati.

*Printed at :*
Tirumala Tirupati Devasthanams Press,
Tirupati.



ಎನ್ನಪ್ಪ ಎನ್ನಣ್ಣ ಎನ್ನಕಾಯುವದೇವ
ನಿನ್ನ ವಿಸ್ಮರಣೆಯು ಕೊಡದಿರೊ ಶ್ರೀನಿವಾಸದಯಾನಿಧೆ

# ಪಂಡಿತರ ಅಭಿಪ್ರಾಯಗಳು

ಹರಿದಾಸಸಾಹಿತ್ಯಸೇವಾಪ್ರಸಕ್ತ

**ಡಾ. ಜಿ. ವರದರಾಜರಾವ್** ಎಂ. ಎ., ಪಿಎಚ್. ಡಿ

ನಿವೃತ್ತ ಕನ್ನಡ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾಲಯ.

ತಿರುಮಲೆ ತಿರುಪತಿ ದೇವಸ್ಥಾನಗಳ ದಾಸಸಾಹಿತ್ಯ ಯೋಜನೆಯ ವಿಶೇಷ ಅಧಿಕಾರಿಗಳಾಗಿರುವ ಶ್ರೀಮಾನ್ ಕೆ. ಅಪ್ಪಣ್ಣಾಚಾರ್ಯ ಅವರು ರಚಿಸಿರುವ "ಭಕ್ತ ಪುರಂದರದಾಸರು" ಎಂಬ ನಾಟಕವನ್ನು ಆಮೂಲಾಗ್ರವಾಗಿ ಓದಿ ನೋಡಿರುತ್ತೇನೆ. ಅನೇಕ ಮೂಲ ಎಳೆಗಳನ್ನು ಅವಲಂಬಿಸಿ ಹಲವಾರು ಲೇಖಕರು ಶ್ರೀ ಪುರಂದರದಾಸರ ಜೀವನವನ್ನು ನಾನಾವಿಧಗಳಲ್ಲಿ ನಿರೂಪಿಸುತ್ತಾರೆ.

ಪ್ರಕೃತದಲ್ಲಿ ಶ್ರೀ ಕೆ. ಅಪ್ಪಣ್ಣಾಚಾರ್ಯ ಅವರು, ಸಾಂಪ್ರದಾಯಿಕವಾಗಿ ಉಳಿದು ಬಂದ ಮುಖ್ಯಕಥಾವಸ್ತುವನ್ನು ಆಧಾರವಾಗಿ ಇಟ್ಟುಕೊಂಡು, ಭಕ್ತ ಪುರಂದರದಾಸರ ಜೀವನಚರಿತ್ರೆಯನ್ನು ದೃಶ್ಯರೂಪಕ್ಕೆ ಅಳವಡಿಸಿರುತ್ತಾರೆ. ನಾಟಕದ ಸಂವಿಧಾನವೂ ಸಹ ಬಹುಮಟ್ಟಿಗೆ ಸಾಂಪ್ರದಾಯಿಕವಾಗಿಯೇ ಸಾಗುತ್ತದೆ. ಶ್ರೀನಿವಾಸನಾಯಕರ ಜೀವನದಲ್ಲಿ ಸಾತ್ವಿಕಮೂರ್ತಿಯಾದ ಸರಸ್ವತೀ ಬಾಯಿಯ ಉದಾರವಾದ ಮನೋಧರ್ಮಕ್ಕೂ, ಶ್ರೀಮಂತನಾಗಿ ಕಿಲುಬುಕಾಸನ್ನೂ ಗಂಟುಕಟ್ಟಿಡುವ ಪರಮ ಲೋಭಿಯಾದ ಆತನ ಜಿಪುಣ ಸ್ವಭಾವಕ್ಕೂ ನಡೆಯುವ ಸಂಘರ್ಷಣೆಯೇ ಪ್ರಧಾನಸೂತ್ರ. ಶ್ರೀಮಾನ್ ಕೆ ಅಪ್ಪಣ್ಣಾಚಾರ್ಯ ಅವರು ಈ ಉಭಯಸ್ವಭಾವಗಳ ಸಂಘರ್ಷಣೆಯನ್ನು ಸಾಕಷ್ಟು ಮನದಟ್ಟುವಂತೆ ಚಿತ್ರಿಸಿರುತ್ತಾರೆ. ಒಟ್ಟು ನಾಟಕವನ್ನು ಸಮೀಕ್ಷಿಸಿದಾಗ ಭಕ್ತಪುರಂದರದಾಸರ ಜೀವನದ ಸತ್ಯ ಮಹತ್ವಗಳ ಪರಿಚಯವಾಗುವುದರಲ್ಲಿ ಸಂದೇಹವಿಲ್ಲ.

ಗಣಿಯಲ್ಲಿ ಗುಪ್ತವಾಗಿರುವ ಚಿನ್ನದ ಅದಿರನ್ನು ಅಗೆದು, ಹೊರತೆಗೆದು, ಅದರ ಮಾಲಿನ್ಯವನ್ನೆಲ್ಲಾ ಹೋಗಲಾಡಿಸಿ, ಕಡೆಗೆ ಅಪರಂಜಿಯ ರೂಪದಲ್ಲಿ ನಮ್ಮ ಮುಂದಿಡುವ ಖನಿಜತಜ್ಞನ ಕೆಲಸ ಎಷ್ಟು ಮಹತ್ವಪೂರ್ಣವಾದುದೋ, ಹಾಗೆಯೇ ನಾಟಕಕಾರನಾಗಲಿ, ಜೀವನಚರಿತ್ರೆಕಾರನಾಗಲಿ, ಒಂದು ವ್ಯಕ್ತಿಯ ಮಹತ್ವವನ್ನು ಬೆಳಕಿಗೆ ತರುವಲ್ಲಿ, ಆ ಮಹಾಮಹಿಮ ಪುರುಷನ ನಡೆ ನುಡಿಗಳಲ್ಲಿ ಪಡಿಮೂಡಿ ಕಾಣುವ ದಿವ್ಯಚೇತನದ ಶಕ್ತಿಯತ್ತ ಜನರ ಗಮನ ಸೆಳೆಯಬೇಕಾದುದು ಅಗತ್ಯ. ಈ ಅಂತಸ್ಫೂರ್ತಿಯೇ ಲೇಖಕನ ಪ್ರತಿಭಾದೃಷ್ಟಿಗೆ ಹೆಗ್ಗುರುತು. ಶ್ರೀಮಾನ್ ಕೆ ಅಪ್ಪಣ್ಣಾಚಾರ್ಯ ಅವರ ಈ ನಾಟಕದಲ್ಲಿ ಈ ಬಗ್ಗೆ ಮತ್ತಷ್ಟು ಪ್ರೇಕ್ಷಕರ ಗಮನ ಸೆಳೆಯಲು ಸಾಕಷ್ಟು ಅವಕಾಶ ಇದೆಯೆಂದು ನನ್ನ ಎಣಿಕೆ.

ದಾಸಸಾಹಿತ್ಯ ವ್ಯಾಸಸಾಹಿತ್ಯಗಳೆರಡರಲ್ಲಿಯೂ ಪರಿಶ್ರಮವಿರುವ ಅವರು, ಶ್ರೀ ಪುರಂದರದಾಸರ ಈ ಆಧ್ಯಾತ್ಮಿಕ ಹೃದಯಾನುಭವದ ಆಳವನ್ನು ಹೊಕ್ಕಿ ನೋಡಿದ್ದೇ ಆದರೆ, ಆ ದಾಸ ಶ್ರೇಷ್ಠರ ಮಾತು ಮಾತುಗಳಲ್ಲಿಯೂ ಹದುಗಿ ಮಿನುಗುತ್ತಿರುವ ವರಾಧಿಕ್ಯ ಪ್ರಭೆಯನ್ನು ಅವರು ಗಮನಿಸಬಲ್ಲರೆಂಬುವದರಲ್ಲಿ ನನಗೆ ಸಂದೇಹವಿಲ್ಲ. ಶ್ರೀಯುತರ ನಾಟಕ ಈ ಮೂಲಕ ಪುರಂದರೋಪನಿಷತ್ತಿನ ಮಹತ್ವವನ್ನು ಇನ್ನೂ ಉಜ್ವಲವಾಗಿ ಸಾರಿಹೇಳುವುದರಲ್ಲಿ ಸಾರ್ಥಕವಾಗಬಲ್ಲು ದೆಂದು ವಿಶ್ವಾಸದಿಂದ ಸೂಚಿಸ ಬಯಸುತ್ತೇನೆ.

ಈ ನಾಟಕದ ಹಸ್ತಪ್ರತಿಯನ್ನು ಪರಿಶೀಲಿಸಿ, ಈಬಗ್ಗೆ ನಾಲ್ಕುನುಡಿಗಳನ್ನು ಬರೆಯಲು ಅವಕಾಶ ಕಲ್ಪಿಸಿಕೊಟ್ಟ ನನ್ನ ಮಿತ್ರರಾದ ಶ್ರೀ ಕೆ. ಅಪ್ಪಣ್ಣಾಚಾರ್ಯರಿಗೆ ನಾನು ಕೃತಜ್ಞನಾಗಿದ್ದೇನೆ. ಅವರು ನಿಯೋಜಿಸಿ ಕೊಂಡಿರುವ ಶ್ರೀಹರಿದಾಸ ಸಾಹಿತ್ಯ ಪ್ರಸಾರಕಾರ್ಯದಲ್ಲಿ ಅವರಿಗೆ ಶ್ರೀವೇಂಕಟೇಶ್ವರನ ಪೂರ್ಣಾನುಗ್ರಹ ಲಭಿಸಲೆಂದು ಹಾರೈಸುತ್ತೇನೆ.

ಮೈಸೂರ್.

ಜಿ. ವರದರಾಜರಾವ್.

## ಡಾ॥ ಎ. ಕಮಲನಾಥ 'ಪಂಕಜ್' ಎಂ.ಎ, ಪಿಎಚ್.ಡಿ

ಹಿಂದಿವಿಭಾಗದ ಪ್ರಧಾನಾಧ್ಯಾಪಕರು.
ಆರ್ಟ್ಸ್‌ಮತ್ತುಸೈನ್ಸ್‌ಕಾಲೇಜ್, ಆದವಾನಿ.

"ಭಕ್ತಪುರಂದರದಾಸರು" ನಾಟಕದ ಮೂಲಪ್ರತಿ ತಲುಪಿ ಓದಿ ಆನಂದವಾಯಿತು. ದಾಸರ ಜೀವನದಲ್ಲಿ ನಡೆದ ಮುಖ್ಯವಾದ ಘಟನೆಗಳ ಸಂಯೋಜನೆ ಈನಾಟಕದಲ್ಲಿ ಬಹು ಸುಂದರವಾಗಿ ಮಾಡಲಾಗಿದೆ. ದಾಸರ ಹಾಡುಗಳನ್ನು ಸರಿಯಾದ ಸಂದರ್ಭಗಳಲ್ಲಿ ಇಡಲಾಗಿದೆ. ಈನಾಟಕದ ಐದನೇಅಂಕ, ಪ್ರಭಾವಶಾಲಿಯಾಗಿ ಪಾಠಕರನ್ನು ಪುಲಕಿತ ಮಾಡಬಲ್ಲದು. ರಂಗ ಮಂಚದ ಪ್ರದರ್ಶನಕ್ಕೂ ಅನುಕೂಲವಾಗಿರುವುದು ಇದರ ವಿಶೇಷಗುಣ.

ಇಂಥಾನಾಟಕವನ್ನು ರಚಿಸಿದ ನಿಮಗೆ ನನ್ನ ಅಭಿನಂದನೆಗಳು.

ಆದವಾನಿ

ಭವದೀಯ
ಕಮಲನಾಥ 'ಪಂಕಜ್'

## ಶ್ರೀಮತಿ ಜಮುನ

38 3ನೇ ಮುಖ್ಯರಸ್ತೆ ಗಾಂಧೀನಗರ್ ಅಡಯಾರ್ ಮದ್ರಾಸ್-೨೦.

ಮಹಾಭಕ್ತರೂ, ದಾಸಾಗ್ರಣಿಗಳೂ ಆದ ಶ್ರೀಪುರಂದರದಾಸರ ಜೀವಿತ ಚರಿತ್ರೆಯನ್ನು ನಾಟಕ ರೂಪದಲ್ಲಿ ನೋಡುವ ಅವಕಾಶ ದೊರೆತದ್ದಕ್ಕಾಗಿ ಆನಂದಿಸುತ್ತಿದ್ದೇನೆ.

ಪರಮಭಕ್ತರ ಜೀವಿತ ಘಟನೆಗಳನ್ನು ರಸವತ್ತರವಾಗಿ ಕಲಾಕಾರರೆಲ್ಲರೂ ಪ್ರದರ್ಶಿಸಿದರು. ಮುಖ್ಯವಾಗಿ ಈ ನಾಟಕಕ್ಕೆ ಪ್ರಾಣಪ್ರದವಾಗಿರುವುದು ಇದರಲ್ಲಿರುವ ಸಮಯೋಚಿತ ಸಂಭಾಷಣೆಗಳು. ನಾಟಕದ ಕೊನೆಯ ಘಟ್ಟವು ಅಭಿಜ್ಞರೆಲ್ಲರನ್ನೂ ಮರೆಯಲಾರದ ಘಟ್ಟವಾಗಿ ಆಕರ್ಷಿಸಿತು. ಮುಖ್ಯವಾಗಿ ಈ ನಾಟಕದ ರಚಯಿತರಾದ ಶ್ರೀ ಕೆ ಅಪ್ಪಣ್ಣಾಚಾರ್ಯರ ರಚನಾ ಸಾಮರ್ಥ್ಯವು ಮೆಚ್ಚತಕ್ಕದ್ದಾಗಿದೆ. ಪುರಂದರದಾಸರ ಪಾತ್ರದಲ್ಲಿ ನಟಿಸಿದ ಕಲಾಕಾರರಾದ ಶ್ರೀ ಎಸ್. ಎ. ರಂಗಭಟ್ಟರ್ ಅವರು ಅದ್ಭುತವಾಗಿ ನಟಿಸಿ ಆ ಪಾತ್ರಕ್ಕೆ ಉದಾತ್ತತೆಯನ್ನು ತಂದುಕೊಟ್ಟರು. ಬಾಲಕೃಷ್ಣನಾಗಿ ನಟಿಸಿದ ಚಿರಂಜೀವಿ ಕೆ. ಗುರುರಾಜನಿಗೆ ನನ್ನ ಆಶೀರ್ವಾದಗಳು.

ಜಮುನ

## ಡಾ|| ಕೆ. ಗೋಕುಲನಾಥ್ ಎಂ. ಎ, ಪಿಎಚ್.ಡಿ

ಕನ್ನಡ ಉಪನ್ಯಾಸಕರು.

ಆಚಾರ್ಯ ಪಾಠಶಾಲಾ ಕಾಲೇಜು

ಬೆಂಗಳೂರು 560009.

ಶ್ರೀ ಕೆ. ಅಪ್ಪಣ್ಣಾಚಾರ್ಯರು ರಚಿಸಿರುವ ಶ್ರೀ ಪುರಂದರದಾಸರನ್ನು ಕುರಿತ ನಾಟಕ ಒಂದು ಸಫಲಪ್ರಯತ್ನವಾಗಿದೆ. ಐದು ಅಂಕಗಳುಳ್ಳ ಈ ನಾಟಕ ತಂತ್ರದ ದೃಷ್ಟಿಯಿಂದಲೂ ಮೆಚ್ಚುವಂತಿದೆ. ಪಾತ್ರಗಳ ಸಂಭಾಷಣೆಯಲ್ಲಿ ಜೀವಂತಿಕೆ ಇದೆ. ಶ್ರೀನಿವಾಸನಾಯಕರ ಜಿಪುಣತನ, ಸರಸ್ವತಿಯ ತ್ಯಾಗಸ್ವಭಾವ, ಪರಮಾತ್ಮನ ಲೀಲೆ, ಪುರಂದರದಾಸರ ಭಕ್ತಹೃದಯ, ಇವುಗಳು ನಾಟಕವನ್ನೋದಿದಾಗ ನೋಡಿದಾಗ ಪ್ರೇಕ್ಷಕರ ಮನಸ್ಸಿನಮೇಲೆ ಪ್ರಭಾವವನ್ನು ಬೀರುವಂತಹ ಸಜೀವ ಪಾತ್ರಗಳಾಗಿವೆ. ನಾಟಕಕಾರರು ಕಥಾವಸ್ತುವಿನಲ್ಲಿ ಮಾಡಿಕೊಂಡಿರುವ ಬದಲಾವಣೆಗಳು ನಾಟಕಕ್ಕೆ ಮೆರುಗನ್ನು ಕೊಡುವಂತಿವೆ. ಇತರ ಹರಿದಾಸರ ಜೀವನವನ್ನು ಆಧರಿಸಿ ಇಂತಹ ನಾಟಕಗಳನ್ನು ಆಚಾರ್ಯರು ರಚಿಸ ಲೆಂದು ಹಾರೈಸುತ್ತೇನೆ.

ಬೆಂಗಳೂರು.

ಕೆ. ಗೋಕುಲನಾಥ್

## ಕೇ. ಮೋಹನ್‌ರಾವ್ (ಕಲಾವಿದರು)

ನಂ. ಡಿ. 66 3ನೇ ಮುಖ್ಯರಸ್ತೆ
7ನೇ ಅಡ್ಡರಸ್ತೆ ಪ್ರಕಾಶನಗರ, ಬೆಂಗಳೂರು 560021

"ಶ್ರೀ ಪುರಂದರದಾಸರು" ಎಂಬ ನಾಟಕವನ್ನು ಸಂಪೂರ್ಣವಾಗಿ ಓದಿದ ಮನಸ್ಸಿಗೆ ತುಂಬಾ ಆನಂದವಾಯಿತು. ಈ ನಾಟಕ ರಂಗಭೂಮಿಯ ಮೇಲೆ ಮಿಸಲು ಉತ್ತಮವಾದ ಚಿತ್ರಣವಾಗಿದೆ. ಈ ನಾಟಕದ ರಚಯಿತರಾದ ಪ್ಪಣ್ಣಾಚಾರ್ಯರು ತಮ್ಮದೇ ಆದ ಸರಳವಾದ ಸುಲಲಿತವಾದ ಶೈಲಿಯಲ್ಲಿ ಸಣ್ಣ ವರಿಗೂ ಹಿಡಿಸುವಂತೆ ಚಿತ್ರಿಸಿರುವುದು ಒಂದು ಸಂತಸದ ಸಂಗತಿಯೇ ಇವರಿಂದ ಇನ್ನೂ ಹೆಚ್ಚಿನ ರೀತಿಯಲ್ಲಿ ದಾಸರುಗಳ ಸೇವೆ ನಡೆಯಲಿ ಎಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

ಕೂಪು. ಕೇ. ಮೋಹನ್‌ರಾವ್.

## ಡಾ॥ ಕೆ. ಎಮ್. ಕೃಷ್ಣಾರಾವ್ ಎಂ. ಎ, ಪಿಎಚ್. ಡಿ.

ಕನ್ನಡ ಪ್ರೊಫೆಸರ್.
ಉಸ್ಮಾನಿಯಾ ವಿಶ್ವವಿದ್ಯಾಲಯ, ಹೈದರಾಬಾದ್, 500007.

ಶ್ರೀ ಪುರಂದರದಾಸರನ್ನು ಕುರಿತು ತಿರುಮಲೆ ತಿರುಪತಿ ದೇವಸ್ಥಾನಗಳ ಯಲ್ಲಿ ದಾಸಸಾಹಿತ್ಯಯೋಜನಾಧಿಕಾರಿಯಾಗಿರುವ ಶ್ರೀಯುತ ಕೆ. ಅಪ್ಪಣ್ಣಾ ರ್ಯ ಅವರು ಒಂದು ಸ್ವಾರಸ್ಯವಾದ ನಾಟಕವನ್ನು ರಚಿದ್ದಾರೆ.

"ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ" ಂತೆ, ಭಿನ್ನ ಅಭಿರುಚಿಗಳುಳ್ಳ ಬಹುಜನರಿಗೆ ನಾಟಕ ಆನಂದದಾಯಿ. ಕಾವ್ಯ ನಾಟಕಕ್ಕೆ ವಿಶಿಷ್ಟಸ್ಥಾನವಿದೆ.

ಶ್ರೀಮಾನ್ ಕೆ. ಅಪ್ಪಣ್ಣಾಚಾರ್ಯರು ತುಂಬ ಶ್ರದ್ಧಾಸಕ್ತಿಗಳಿಂದ, ಪುರಂ ದಾಸರಲ್ಲಿ ಅವರ ಭಕ್ತಿ ಗೌರವಗಳಿಂದ, ಅವರ ಮಹಿಮಾದ್ಯೋತಕವಾಗುವ ಯಲ್ಲಿ ಈ ನಾಟಕ ಕೃತಿಯನ್ನು ರಚಿಸಿದ್ದಾರೆ.

ಪುರಂದರದಾಸರ ಆದರ್ಶ ಜೀವನದಿಂದ, ನಡೆನುಡಿಗಳಿಂದ, ಅವರು ರಚಿಸಿರುವ ಗಳಿಂದ ನಾವು ತಿಳಿಯಬೇಕಾದುದು, ತಿಳಿದು ಆಚರಣೆಯಲ್ಲಿ ತಂದು ಕೊಳ್ಳ ಕಾದುದು, ತಂದುಕೊಂಡು ನಮ್ಮ ಜೀವನವನ್ನು ಉದಾತ್ತೀಕರಿಸಿಕೊಂಡು ಸ್ಥಾರವಾಗ ಬೇಕಾದುದು ಉಂಟೆಂದು ಈ ನಾಟಕದಿಂದ ತಿಳಿದು ಬರುತ್ತದೆ. ಷ್ಟಿಯಿಂದ ಈ ನಾಟಕ ಯಶಸ್ವಿಯಾಗಿದೆ ಎಂದೂ ಹೇಳಬಹುದು.

"ದಾಸರೆಂದರೆ ಪುರಂದರದಾಸರಯ್ಯ" ಎಂದು ವ್ಯಾಸರಾಯರಿಂದ ಸಾಕ್ಷಾತ್ ಹೊಗಳಿಸಿ ಕೊಂಡ ಮಹನೀಯರೂ ಹಾಗೂ ಆದರ್ಶ ಹರಿದಾಸ ಜೀವನವನ್ನು ನಡೆಸಿದ ವರು ಶ್ರೀ ಪುರಂದರದಾಸರು ಎನ್ನುವುದು ಈ ನಾಟಕದಲ್ಲಿ ಚೆನ್ನಾಗಿ ಮೂಡಿ ಬಂದಿದೆ.

ಪುರಂದರದಾಸರು ದಾಸಜೀವನವನ್ನು ನಡೆಸಿ ಕೊಂಡು ಬಂದಾಗ ನಡೆದು ಹೋದ ಹಲವು ಮಹಿಮಾ ಪೂರ್ಣ ಸನ್ನಿವೇಶಗಳನ್ನು ನಾಟಕಕಾರರು ಚೆನ್ನಾಗಿ ಬಣ್ಣಿಸಿದ್ದಾರೆ. ಪುರಂದರದಾಸರ ಸವಿನೆನಪಿಗೆ ಅಪ್ಪಣ್ಣಾಚಾರ್ಯರು ನೀಡಿರುವ ಭಕ್ತಿ ಪುಷ್ಪಾಂಜಲಿ ಇದು ಎಂದರೂ ಸಲ್ಲುವುದು. ಇವರ ಲೇಖನದಿಂದ ಇನ್ನೂ ಒಳ್ಳೆಯ ಕೃತಿಗಳು ಹರಿದು ಬರಲಿ ಎಂದು ಆಶಿಸುತ್ತೇನೆ.

ಹೈದರಾಬಾದ್. ಕೆ. ಎಸ್. ಕೃಷ್ಣಾರಾವ್.

## ಬಿ. ಸತ್ಯನಾರಾಯಣಾಚಾರ್ಯ ಬಿಕಾಂ.

### ಬೆಂಗಳೂರ್ 40.

ಶ್ರೀಪುರಂದರದಾಸರ ಉತ್ಕೃಷ್ಟವಾದ ಜೀವನವನ್ನು ನಾಟಕದ ರೂಪದಲ್ಲಿ ರಚಿಸುವುದರ ಮೂಲಕ ಶ್ರೀ ಕೆ. ಅಪ್ಪಣ್ಣಾಚಾರ್ಯರು ಬಹುಸ್ತುತ್ಯವಾದ ಕಾರ್ಯ ವನ್ನು ಮಾಡಿದ್ದಾರೆ. ಈ ನಾಟಕವು ಸಪ್ರಮಾಣಿಸಿದ್ದೂ, ರಸಭರಿತವೂ ಆಗಿದೆ. ಈ ದೃಶ್ಯಕಾವ್ಯದಲ್ಲಿರುವ ಸಾಹಿತ್ಯಶೈಲಿಯು ಅತಿಉನ್ನತ ಮಟ್ಟದ್ದಾಗಿದೆ. ಕೇವಲ ಹಸ್ತಪ್ರತಿಯನ್ನು ಓದಿದರೇನೇ ಆನಂದಬಾಷ್ಪಗಳು ನಮಗರಿಯುವಂತ ಸುರಿಯು ತ್ತಿರುವಾಗ, ಇನ್ನು ಉಚಿತವಾದ ದೃಶ್ಯಗಳೊಂದಿಗೆ ಅಭಿನಯಿಸಲ್ಪಟ್ಟಾಗ ಈ ನಾಟಕ ಅದೆಷ್ಟು ಆನಂದವನ್ನುಂಟು ಮಾಡಬಲ್ಲದೋ ! ಅದನ್ನು ನೋಡಿಯೇ ಅನುಭವಿಸ ಬೇಕು. ಇಂಥಾ ಉನ್ನತ ಮಟ್ಟದ ಮಹನೀಯರ ಜೀವನಚರಿತ್ರೆಗಳು ಇನ್ನೂ ಹೇರಳವಾಗಿ ಹೊರಬರಲೆಂದು ಹಾರೈಸುತ್ತೇನೆ.

ಇತಿಸಜ್ಜನವಿಧೇಯ

ಬಿ. ಸತ್ಯನಾರಾಯಣಾಚಾರ್ಯ

## ಗುಪ್ತಕವಿ ಕವುತಾಳ

ಅಪ್ಪಣ್ಣಾಚಾರ್ಯರು ತಮ್ಮಿಂದ ರಚಿತವಾದ "ಪುರಂದರದಾಸರು" ಎಂಬ ನಾಟಕವನ್ನು ಅತಿ ಪ್ರೇಮಭಾವದಿಂದ ಓದಿ ತೋರಿಸಿದರು. ಸಂಸ್ಕೃತ ಪಂಡಿತ ರಾದರೂ ಕೃತಿಯನ್ನು ಪಂಡಿತ ಪಾಮರರು ಮನಮೆಚ್ಚುವಂತೆ ರಚಿಸಿದ್ದಾರೆ. ಭಾಷೆ

ಬಲ್ಲವರೆಲ್ಲರೂ ತಿಳಿಯುವ ಸರಳ ಮಾತುಗಳನ್ನೇ ಉಪಯೋಗಿಸಿದ್ದಾರೆ. ಪುರಂದರ ಜೀವನ ಚರಿತ್ರೆಯನ್ನು ಪರಿಶೋಧಿಸಿ ಪ್ರಚಲಿತ ಅವರ ಚರಿತ್ರೆಯಲ್ಲಿರುವ ತೊಡಕುಗಳನ್ನು ಸರಿಪಡಿಸಿದ್ದಾರೆ. ನಾಟಕವು ರಸಿಕರಂಜನಿಯಾಗಿದೆ. ಎಲ್ಲಿಯೂ ಅವಾಚ್ಯ ಅಶ್ಲೀಲತೆಗಳಿಲ್ಲ. ಪ್ರವೇಶದೃಶ್ಯಗಳು ಒಂದರಿಂದೊಂದು ಸೊಗಸು ಸಂಭಾಷಣೆಗಳಿಂದ ನೋಟಕರಿಗೆ ಬೇಸರಬರಿಸದಂತೆ ಸಾಗಿವೆ. ಈ ನಾಟಕವು ನಾಟ್ಯ ವಿಲಾಸಿಗಳಿಗೆ ಅಷ್ಟೇಮೀಸಲಲ್ಲ, ನಾಟ್ಯಜೀವಿಗಳಾದ ಕಂಪನಿಯವರು ಸಹ ಪ್ರಯೋಗಿಸುವಂತಹ ಸುಂದರನಾಟಕ; ನವರಸಭರಿತ. ಆದರೊಂದು ಕೊರತೆ. ನಾಟಕಕ್ಕೆ ಹಾಸ್ಯ ಸಾಲದು. ಈಗಿನ ಜಗತ್ತು ಹಾಸ್ಯಕ್ಕೆ ಮನಸೋತಿದೆ. ಶ್ರೀಯುತರಿಂದ ಇಂತಹ ನೈತಿಕ ನಾಟಕಗಳು ಹೆಚ್ಚಾಗಿ ರಚಿಸಲ್ಪಟ್ಟು ಕನ್ನಡಾಂಬೆಯು ಕೊರಳಲಂಕೃತವಾಗಲೆಂದು ಹಾರೈಸುತ್ತೇನೆ.

ದಾಸವರ್ಯರ ಪರಮಚರಿತೆಯು ।
ತೋಷದಿಂಜನ ಮೆಚ್ಚುವಂತಹ ।
ಭಾಷೆ ಕನ್ನಡದಲ್ಲಿ ರಚಿಸಿದ ಅಪ್ಪಣ್ಣಾರ್ಯಕೃತಿ ।

ದಾಸಭಾವದ ತತ್ವಸಾರವು
ಲೇಸು ಇದುವೇ ನೋಕ್ಷಗಾಮಿಗೆ ।
ಶ್ರೀಶನುಗ್ರಹ ದೊರೆವನಾಟಕ ಪುರಂದರಾಕೃತಿಯು ॥

ಗುಪ್ತಕವಿ ಕವಿತಾಳ.

## ದತ್ತಾತ್ರೇಯನಾರಾಯಣಪಾಟೀಲ್

ಕವಲೂರ್ ಪೋಸ್ಟು

ಕೊಪ್ಪಳ ತಾಲೂಕ, ರಾಯಚೂರು ಜಿಲ್ಲೆ.

ಪುರಂದರದಾಸರು ಎಂಬ ನಾಟಕವನ್ನು ಬರೆದಿರುವ ಶ್ರೀಯುತ ಕೆ. ಅಪ್ಪಣ್ಣಾಚಾರ್ಯ ಅವರು ವಸ್ತು ನಿಷ್ಠವಾದ ಚಾರಿತ್ರಿಕ ಸತ್ಯತೆಯನ್ನು ಯಥಾವತ್ತಾಗಿ ಚಿತ್ರಿಸುವಲ್ಲಿ ಯಶಸ್ವಿಯಾಗಿದ್ದಾರೆ ಎಂಬುವುದರಲ್ಲಿ ಸಂದೇಹವಿಲ್ಲ. ದಾಸರ ಜೀವನದಲ್ಲಿ ಘಟಿಸಿ ಹೋದ ಕ್ರಿಯಾವಿಶೇಷಗಳ ನಿರೂಪಣೆ ಮಾರ್ಮಿಕವಾಗಿ ಮೂಡಿ ಬಂದಿದೆ. ನಾಟಕಕಾರರು ಬಳಸಿ ಕೊಂಡಿರುವ ಸರಳವಾದ ತಂತ್ರಗಳು ಹಾಗೂ ರಸೋಚಿತ ಸಂಭಾಷಣೆಗಳು, ದಾಸರ ಪದಗಳೇ ಪ್ರಸ್ತುತ ನಾಟಕದ ರಂಗಗೀತೆಗಳಾಗಿ ಬಂದಿರುವುದು, ಈ ನಾಟಕದ ವೈಶಿಷ್ಟ್ಯವಾಗಿದೆ.

ಪುರಂದರದಾಸರು ಎಂಬನಾಟಕವು ನಾಟ್ಯಾಂಶಗಳನ್ನು ಹೆಣೆಯುವುದರಲ್ಲಿ ಹೊಸತನವನ್ನು ಸಾಧಿಸಿದೆ ಎಂದು ಹೇಳಬಹುದು. ಈ ನಾಟಕದಲ್ಲಿ ಬರುವ ಪುರಂದರದಾಸರು ತಮ್ಮ ವ್ಯಕ್ತಿತ್ವಕ್ಕೆ ತಾವೇ ವಕಾಲತ್ ವಹಿಸದೆ, ಇನ್ನುಳಿದ ಪೋಷಕ ಪಾತ್ರಗಳ ನೆರವಿನಿಂದ ಹಂತ ಹಂತ ವಾಗಿ ತಮ್ಮ ವ್ಯಕ್ತಿತ್ವವನ್ನು ಬೆಳಯಿಸಿ ಕೊಂಡು ಬರುತ್ತಿರುವುದು ನಾಟಕದ ವಸ್ತುವಿಗೆ ಇಮ್ಮಡಿಯಾಗಿ ಅರ್ಥವನ್ನು ತಂದು ಕೊಡುತ್ತಿದೆ.

ನಾಟಕದಲ್ಲಿ ಬಳಕೆಯಾಗಿರುವ ಭಾಷೆಯು ಕೇವಲ ಭಾವನೆಗಳ ಅಭಿವ್ಯಕ್ತಿ ಯಾಗಿ ಮೂಡಿ ಬಂದರೂ, ಅನುಭವಕ್ಕಿಂತ ಹೆಚ್ಚಾಗಿ ಭಾಷೆಯು ಆಡಂಬರ ಇಲ್ಲ ದಿರುವುದು ಹೆಮ್ಮೆಯವಿಷಯ. ಸಮಕಾಲೀನ ಹಾಗೂ ಸರ್ವಕಾಲೀನ ಮೌಲ್ಯ ಗಳನ್ನು ಪಡೆದು, ಸರ್ವವಾಚಕವೃಂದವನ್ನು ತಣಿಸುವಶಕ್ತಿ ಈನಾಟಕದಲ್ಲಿದೆ ಎಂಬುದೇ ನನ್ನ ಅಭಿಪ್ರಾಯ.

ತಮ್ಮ
ದತ್ತಾತ್ರೇಯ ನಾರಾಯಣಪಾಟೇಲ್
ಕವಲೂರ್



# ನಾಟಕದಲ್ಲಿ ಬರುವ ಪಾತ್ರಗಳು

ಸೂತ್ರಧಾರ.

ನಟಿ.

ಶ್ರೀನಿವಾಸನಾಯಕನು ( ಪುರಂದರದಾಸರು. )

ಸರಸ್ವತಿಬಾಯಿ. ( ಶ್ರೀನಿವಾಸನಾಯಕನ ಹೆಂಡತಿ )

ಬ್ರಾಹ್ಮಣ.

ಬ್ರಾಹ್ಮಣನಮಗ.

ವರದ. ( ಶ್ರೀನಿವಾಸನಾಯಕನಮಗ )

ರಾಮಾಚಾರ್ಯ.

ಕೃಷ್ಣಾಚಾರ್ಯ.

ನರಸಪ್ಪ.

ಹನುಮಪ್ಪ.

ರಾಮಣ್ಣ.

ಬಿದಾರುಜನ ರೈತರು.

ಅನ್ನಮಾಚಾರ್ಯರು.

ಶ್ರೀವೆಂಕಟೇಶ್ವರ.

ಅರ್ಚಕ.

ಅಧಿಕಪ್ರಸಂಗಿ.

ದಂಡನಾಯಕ.

ಶ್ರೀ ಬಾಲಕೃಷ್ಣ.

# ಪ್ರಕೃತನಾಟಕದಲ್ಲಿ ಕಾಣಿಸುವ ರಂಗಸ್ಥಳ, ಅದಕ್ಕೆ ಬೇಕಾಗುವ ಉಪಕರಣಗಳು

## ಪ್ರಸ್ತಾವನೆ :-

ಸೂತ್ರಧಾರನಮನೆ. ನಟರಾಜನವಿಗ್ರಹ ಅಥವಾ ನಟರಾಜನಚಿತ್ರಪಟ. ಇದು ಗೋಡೆಗೆ ಆತುನಿಂತಂತೆ ಅಥವಾ ತೂಗುಹಾಕಿದಂತೆ ಇರಬೇಕು. ಅದರ ಕೆಳಗಡೆ ಒಂದು ಪೀಠದಮೇಲೆ ಮಾಲೆಗಳಿಂದ ಅಲಂಕೃತವಾದ ಪುರಂದರದಾಸರಚಿತ್ರಪಟ. ಆದರ ಮುಂದೆ ತಟ್ಟೆಯಲ್ಲಿ ಒಡೆದ ತೆಂಗಿನಕಾಯಿ, ಬಾಳೇಹಣ್ಣುಗಳು, ಆರತಿಯತಟ್ಟೆ, ಇರಬೇಕು. ಒಂದುಪಕ್ಕದಲ್ಲಿ ಎರಡು ಮೃದಂಗಗಳು, ತಂಬೂರಿ, ಕಾಲಿನಗೆಜ್ಜೆಗಳು ಇರಬೇಕು.

## ಪ್ರಥಮಾಂಕ :-

ಶ್ರೀಮಂತಿಕೆಯನ್ನು ಎತ್ತಿತೋರುವ ಶ್ರೀನಿವಾಸನಾಯಕನಮನೆ. ರಂಗಸ್ಥಲದ ಬಲಗಡೆಯಲ್ಲಿ ಸರ್ವಾಲಂಕಾರಭರಿತವಾದ ತುಳಸೀಬೃಂದಾವನ. ಬೃಂದಾವನದ ಮುಂದುಗಡೆ ಒಂದುಹಾರತಿಯತಟ್ಟೆ, ಎಡಬಲಗಳಲ್ಲಿ ಎರಡು ದೀಪಸ್ತಂಭಗಳು, ಒಂದುತಟ್ಟೆಯಲ್ಲಿಹೂವು, ಹಣ್ಣು, ಅರಿಸಿಣ, ಕುಂಕುಮಗಳು, ಒಂದು ತಂಬಿಗೆಯಲ್ಲಿ ನೀರು ಇರಬೇಕು. ಹಿನ್ನೆಲೆಯಲ್ಲಿ ಒಂದುಖಾಲಿ ಕೊಡ ಸಿದ್ಧವಾಗಿರಬೇಕು,

ರಂಗಸ್ಥಳದ ಎಡಗಡೆಯಲ್ಲಿ ಪ್ರಾಚೀನ ಕಾಲದ ಎರಡು ಕುರ್ಚಿಗಳು, ಮಾರ್ವಾಡಿಯವರ ಹಾಸಿಗೆ, ಆನಿಕೊಳ್ಳಲು ತಲೆದಿಂಬುಗಳು ಹಾಸಿಗೆಯ ಮುಂದೆ ಲೆಖ ಬರೆದುಕೊಳ್ಳಲು ಒಂದು ಉದ್ದಕ್ಕಿರುವ ಡೆಸ್ಕ, ಅದರಮೇಲೆ ಭಂಗಾರವನ್ನು ತೂಗುವತಕ್ಕಡಿ, ಪಕ್ಕದಲ್ಲಿ ಲೆಕ್ಕದ ಪುಸ್ತಕಗಳು, ಬೆಳ್ಳಿ ಭಂಗಾರವನ್ನು ಪರೀಕ್ಷಿಸಲು ಉಪಯೋಗಿಸುವ ದ್ರಾವಕದಸೀಸಾ, ಆದರ ಪಕ್ಕದಲ್ಲೇ ಮಸಿಸೀಸಾ, ಲೆಖಣಿಕೆಗಳು ಇರಬೇಕು.

## ದ್ವಿತೀಯಾಂಕ :-

ಎಲ್ಲವೂ ಪ್ರಥಮಾಂಕದಲ್ಲಿ ಇದ್ದಂತೆ ಇರುತ್ತವೆ.

## ತೃತೀಯಾಂಕ :-

ಹಳ್ಳಿಯ ವಾತಾವರಣವನ್ನು ಸೂಚಿಸುವ ಬೀದಿಯ ದೃಶ್ಯದಿಂದ ಕೂಡಿದ ತೆರೆ. ಮಧ್ಯದಲ್ಲಿ ಒಂದು ಸಣ್ಣಕಟ್ಟೆ. ಆ ಕಟ್ಟೆಯ ಮೇಲೆ, ಕುಂಕುಮದಿಂದಲೂ, ಕೆಂಪು ಮತ್ತು ಬಿಳೇಹೂವುಗಳಿಂದ ಅಲಂಕೃತವಾದ ಒಂದು ಕಲ್ಲು. (ಊರದೇವರು)

ಚತುರ್ಥಾಂಕ :–

ತಿರುಮಲೆಯ ಶ್ರೀವೇಂಕಟೇಶ್ವರನ ಗರ್ಭಗುಡಿಯ ಪಕ್ಕದಲ್ಲಿರುವ ಯಜ್ಞ ಮಂಟಪವನ್ನು ಪ್ರತಿಬಿಂಬಿಸುವ ತೆರೆ. ಒಂದು ಪಕ್ಕದಲ್ಲಿ ಯಜ್ಞಕುಂಡ. (ಇದು ಇಲ್ಲದೇ ಇದ್ದರೂ ನಡೆಯುತ್ತದೆ. ) ಹಿನ್ನೆಲೆಯಲ್ಲಿ ಭಂಗಾರದ ತಂಬಿಗೆ ಯಂತೆ ತೋರುವ ಒಂದು ತಂಬಿಗೆಯನ್ನು ಸಿದ್ಧವಾಗಿಡಬೇಕು.

ಪಂಚಮಾಂಕ :–

ಎರಡು ಪಕ್ಕಗಳಲ್ಲಿ ಮನೆಗಳಿಂದ ಕೂಡಿದ ಒಂದು ಬೀದಿಯ ದೃಶ್ಯವನ್ನು ಪ್ರತಿಬಿಂಬಿಸುವ ತೆರೆ. ( ಇದು ವಿಷ್ಕಂಭಕಕ್ಕೆಮಾತ್ರ ಸರಿಹೋಗುವುದು )

ಪಂಢರಾಪುರದವಿಠಲನ ಮಂದಿರದಲ್ಲಿರುವ ಗರ್ಭಗುಡಿಯ ಥೆರೆ. ಎರಡು ಪಕ್ಕದಲ್ಲಿ ಸ್ತಂಭಗಳು. ಈ ಅಂಕದಲ್ಲಿ ರಂಗಸ್ಥಳವು ದೇವಾಲಯದ ಒಳಭಾಗ ದಂತಿರಬೇಕು.



# ಪಾತ್ರಧಾರಿಗಳಿಗೆ ಬೇಕಾಗುವ ವಸ್ತುಗಳು ಮತ್ತು ವೇಷದ ವಿಧಾನ

ಸೂತ್ರಧಾರ :—

( ವಯಸ್ಸು ಸುಮಾರು 40 ವರ್ಷ ) ಪಂಡಿತರಶಾಲು, ಕಂಕಣ, ಕಾಲಿಗೆ ಕಡಗ, ಕುಂಡಲಗಳು, ಉಂಗರಗಳು, ಅಂಚುಳ್ಳ ರೇಷ್ಮೆಯ ಧೋತರ, ತಲೆಗೆ ಕೆಂಪಾದ ಕೂಚಿಪೂಡಿಯ ಪೇಟ, ಕೊರಳಲ್ಲಿ ಒಂದು ಅಥವಾ ಎರಡು ತುಳಸೀ ಮಣಿಯ ಹಾರಗಳು ಹಾಗೂ ಬಂಗಾರದ ಪದಕಗಳು, ತಂಬೂರಿ, ಹಣೆಯಲ್ಲಿ ತಮ್ಮ ಇಚ್ಛೆಯಂತೆ ತಿಲಕವನ್ನಿಡಬಹುದು.

ನಟಿ :–

ಭರತನಾಟ್ಯದವರ ವೇಷದಲ್ಲಿ ಇರಬೇಕು. ವಯಸ್ಸು 20 ರಿಂದ 25 ರ ವರೆಗೆ.

ಶ್ರೀನಿವಾಸನಾಯಕ :—

ಮಹಾರಾಷ್ಟ್ರಪ್ರಾಂತದ ಸಾಹುಕಾರರ ವೇಷ. ತಲೆಗೆ ಟೋಪಸ್. ಜರಿಕಣದ ಕೋಟು, ರೇಷ್ಮೆಯ ಹಳೇಕಾಲದ ಜುಬ್ಬ, ಅಥವಾ ಜರಿಯ ಅಂಚುಳ್ಳ ಸಿಲ್ಕಿನ ಧೋತರ, ಕುಂಡಲಗಳು, ಜರಿಯ ಅಂಚುಗಳು ಕಾಣುವಂತೆ ಮಡಿಸಿದ ಭುಜದ ಮೇಲೆ ಹಾಕಿಕೊಳ್ಳುವ ವಸ್ತ್ರ. ಕೊರಳಲ್ಲಿ ಎರಡು ಮುತ್ತಿನ ಹಾರಗಳು. ಒಂದು ಪದಕವುಳ್ಳ ಬಂಗಾರದ ಹಾರ. ಬೆರಳುಗಳಿಗೆ ಉಂಗುರಗಳು. ಕಾಲಿಗೆ ಹಳೇಕಾಲದ ಚಪ್ಪಲಿಗಳು ( ಪಾಪೋಸು ) ಹಳೆಯಕಾಲದ ರೊಕ್ಕದ ಚೀಲ. ತಾಳೆಪತ್ರಗಳು ಲೇಖನಿ. ಮೂಗುತಿ ಇಡಲು ಬೇಕಾಗುವ ಹಳೆಯಕಾಲದ ಡಬ್ಬಿ. ಬೆಳ್ಳಿಬಂಗಾರದಂತಿರುವ ನಾಣ್ಯಗಳು. ಕಿಲುಬುಹಿಡಿದು ಸವಕಲಾದ ಒಂದು ನಾಣ್ಯ. ಒಂದು ಹರಳಿನ ಮೂಗುತಿ. ತಲೆಗೆ ಮಹಾರಾಷ್ಟ್ರದ ಸಾಹುಕಾರರಂತಹ ರುಮಾಲು. ವಯಸ್ಸು ಸುಮಾರು 30 ವರ್ಷ.

ಪುರಂದರದಾಸರು :—

ವಯಸ್ಸು 40 ವರ್ಷ. ಇಲ್ಲಿ ಪ್ರಧಾನವಾಗಿ ದಾಸರ ವೇಷವನ್ನು ಚಿತ್ರದಲ್ಲಿರುವಂತೆ ಧರಿಸಬೇಕು. ತಲೆಗೆ ಸುತ್ತಲು ಒಂದು ಅಂಚಿನ ಕಾವಿವಸ್ತ್ರ. ಕಾಲಿಗೆ ಗೆಜ್ಜೆಗಳು. ತುಳಸೀಮಣಿಯ ಮಾಲೆಗಳು. ತಂಬೂರಿ ಚಿಟಿಕೆಗಳು. ಗೋಪಾಳಪುಟ್ಟಿ ಅಥವಾ ಕಾವಿವಸ್ತ್ರದ ಜೋಳಿಗೆ. ದಾಸರಿಗೆ ನಾಮಗಳನ್ನು ಚಿತ್ರದಲ್ಲಿ ಕೊಟ್ಟಿರುವಂತೆ ಹಚ್ಚಬೇಕು. ಶ್ರೀನಿವಾಸನಾಯಕರಾಗಿದ್ದಾಗಲೂ ಇದೇ ನಾಮಗಳು.

ಸರಸ್ವತೀಬಾಯಿ :—

ವಯಸ್ಸು ಸುಮಾರು 25 ವರ್ಷ. ಕಚ್ಚೆ ಹಾಕಿಕೊಳ್ಳಲು ಉಪಯೋಗವಾಗುವಂತೆ 9 ಗಜದ ಮೂರು ಸೀರೆಗಳಿರಬೇಕು. ಅದರಲ್ಲಿ ಒಂದು ಪೀತಾಂಬರ ಎರಡು ಸಾಮಾನ್ಯ ಸೀರೆಗಳು. ಒಂದು ಎರಡನೇ ಅಂಕಗಳಲ್ಲಿ ರೇಷ್ಮೆಯ ಸೀರೆಯನ್ನು 4, 5 ನೇ ಅಂಕಗಳಲ್ಲಿ ಸಾಮಾನ್ಯ ಸೀರೆಗಳನ್ನು ಉಡಬೇಕು. ಒಂದು ಮತ್ತು ಎರಡನೇ ಅಂಕಗಳಲ್ಲಿ ಒಳ್ಳೆಸಾಹುಕಾರನ ಹೆಂಡತಿಯಂತೆ ಸಕಲವಿಧವಾದ ಹಳೇ ಕಾಲದ ಆಭರಣಗಳನ್ನು ಧರಿಸಿರಬೇಕು. ಮೂಗಿನಲ್ಲಿ ಮುಖ್ಯವಾಗಿ ಮುತ್ತಿನ ಅಥವಾ ವಜ್ರದ ಮೂಗುತಿ ಇರಬೇಕು.

ವರದ :—

ಶ್ರೀನಿವಾಸನಾಯಕರ ಮಗ. ವಯಸ್ಸು ಸುಮಾರು 15 ವರ್ಷ ವಿರಬೇಕು. ಸಾಮಾನ್ಯ ಧೋತರ ಉಟ್ಟು, ಮೈಮೇಲೆ ಕಾವೀವಸ್ತ್ರವನ್ನು ಹೊದ್ದು, ತುಳಸೀ ಮಣಿಯ ಹಾರವನ್ನು ಹಾಕಿಕೊಂಡು, ತಂದೆ ಯಂತೆ ನಾಮಗಳನ್ನು ಧರಿಸಿದರೆಸಾಕು.

ವೃದ್ಧಬ್ರಾಹ್ಮಣ :—

ಜುಟ್ಟಿನಿಂದ ಕೂಡಿದ ಬಿಳಿಯ ಅಥವಾ ಗ್ರೇಬಣ್ಣದಿಂದ ಕೂಡಿದ ಒಂದು ಟೋಪನ್. ಅದೇ ಬಣ್ಣದ ಗಡ್ಡಮೀಸೆಗಳು. ಹೊದೆಯಲು ಪಂಡಿತರಂಶಾಲು. ಕೊರಳಿಗೆ 2 ಅಥವಾ 3 ತುಳಸೀಮಣಿಯ ಹಾರಗಳು. ಸಾಧಾರಣ ಬಿಳಿಯಪಂಚೆ. ಹಳೆಯ ಕಾಲದ ಕೈಕೋಲು. ನಾಮಗಳು ಚಿತ್ರದಲ್ಲಿದ್ದಂತೆ ಇರಬೇಕು ವಯಸ್ಸು ಸುಮಾರು 70 ವರ್ಷ ವಿರಬೇಕು.

ಬ್ರಾಹ್ಮಣಮಗ :—

ಜುಟ್ಟಿನಿಂದ ಕೂಡಿದ ಟೋಪನ್. ಕೊರಳಿಗೆ ತುಳಸೀಮಣಿಯ ಮಾಲೆಗಳು. ಉಡಲು ಬಿಳಿಯ ಪಂಚೆ. ಹೊದೆಯಲು ಒಂದು ಸಾಮಾನ್ಯವಸ್ತ್ರ. ವಯಸ್ಸು 8 ಅಥವಾ 10 ವರ್ಷಗಳಿರಬೇಕು. ಹುಡುಗ ಎಷ್ಟು ಸಣ್ಣವನಂತಿದ್ದರೆ ಅಷ್ಟು ಒಳ್ಳೆಯದು; ನಾಮಗಳು ಚಿತ್ರದಲ್ಲಿದ್ದಂತೆ ಇರಬೇಕು.

ಬಾಲಕೃಷ್ಣ :—

ನವಿಲುಗರಿಯಿಂದಕೂಡಿದ ಗಂಟು ಹಾಕಿದ ಟೋಪನ್. ಪೀತಾಂಬರ. ಕೈಯಲ್ಲಿ ಕೊಳಲು. ಸಣ್ಣ ಕೃಷ್ಣನಿಗೆ ಇರಬೇಕಾದ ಎಲ್ಲಾ ಆಭರಣಗಳು ಇರಬೇಕು. ಈಪಾತ್ರಧರಿಸುವ ಹುಡುಗ ಮುದ್ದಾಗಿರಬೇಕು. ಬ್ರಾಹ್ಮಣನ ಮಗನ ಪಾತ್ರಧರಿಸಿದ ಹುಡುಗನೇ ಈ ಪಾತ್ರವನ್ನೂ ಧರಿಸಬಹುದು. ಹುಡುಗನ ವಯಸ್ಸು 8 ವರ್ಷ ಕ್ಕಿಂತ ಮೀರಿರ ಬಾರದು. ಎಷ್ಟು ಸಣ್ಣವನಿದ್ದರೆ ಅಷ್ಟು ಒಳ್ಳೆಯದು.

## XIV

ರಾಮಾಚಾರ್ಯರ :—

ಜುಟ್ಟಿನಿಂದ ಕೂಡಿದ ಗ್ರೇಬಣ್ಣದ ಟೋಪನ್ ಮತ್ತು ಅದೇಬಣ್ಣದಗಡ್ಡ. ಹೊದೆಯಲು ಪಂಡಿತರಶಾಲು. ಉಡಲು ಬಿಳಿಯ ಧೋತರ. ತುಳಸೀಮಣಿಯ ಹಾರಗಳು. ಕೈಯಲ್ಲಿ ತುಳಸಿಯ ಪುಟ್ಟಿ. ವಯಸ್ಸು ಸುಮಾರು 70 ವರ್ಷ. ನಾಮಗಳು ಚಿತ್ರದಲ್ಲಿದ್ದಂತೆ. ಗೋಪೀಚಂದನದಿಂದ ನಾಮಗಳನ್ನು ಹಚ್ಚಿರಬೇಕು. ಹಣೆಯಲ್ಲಿ ಅಕ್ಷತಿ ಅಂಗಾರ ಬೇಕಾಗಿಲ್ಲ.

ಅರ್ಚಕರು :—

ಜುಟ್ಟಿನಿಂದ ಕೂಡಿದ ಗ್ರೇಬಣ್ಣದ ಟೋಪನ್. ಬಿಳಿಯ ಧೋತರ. ಕಾವೀ ಬಣ್ಣದ ಹೊದೆಯುವ ವಸ್ತ್ರ. ಕೊರಳಲ್ಲಿ ತುಲಸೀಮಣಿಯ ಹಾರಗಳು ನಾಮಗಳು ಹೆಚ್ಚಿಗೆ ಬೇಕಾಗಿಲ್ಲ. ಹಣೆಯಮೇಲೆ ಮಾತ್ರ ಗೋಪೀಚಂದನದ ಒಂದು ಉದ್ದನೆಯ ನಾಮ. ಮಧ್ಯದಲ್ಲಿ ಕುಂಕುಮದ ಬೊಟ್ಟು, ಪಂಢರಾಪುರದಲ್ಲಿ ಅರ್ಚಕರು ಹಚ್ಚುವಂತೆ ಒಂದುತಟ್ಟೆ, ಒಂದು ತಂಬಿಗೆ, ಹೂವು 2 ಅಥವಾ 3 ಬಾಳೆಯ ಹಣ್ಣುಗಳು, ತಂಬಿಗೆಯಲ್ಲಿ ನೀರು. ರಾಮಾಚಾರ್ಯರ ಪಾತ್ರಧರಿಸಿದ ವ್ಯಕ್ತಿಯೇ ಈ ಅರ್ಚಕರ ಪಾತ್ರವನ್ನು ಧರಿಸಬಹುದು. ವಯಸ್ಸು ರಾಮಾಚಾರ್ಯರಷ್ಟೆ. ಗಡ್ಡವನ್ನು ಮಾತ್ರ ತೆಗೆದು ಪಂಡಿತರ ಶಾಲಿಗೆ ಬದಲು ಕಾವೀವಸ್ತ್ರ ಹೊದೆದು ನಾಮಗಳನ್ನು ಬೇರೆ ಧರಿಸಿದರೆಸಾಕು.

ಕೃಷ್ಣಾಚಾರ್ಯರ :—

ವಯಸ್ಸು ಸುಮಾರು 70 ವರ್ಷ ರಾಮಾಚಾರ್ಯರಂತೆ ವೇಷ. ಗಡ್ಡಬೇಕಾಗಿಲ್ಲ. ಇವರು ಇನ್ನು ಸ್ನಾನಮಾಡಿರುವುದಿಲ್ಲವಾದಕಾರಣ ನಾಮಗಳು ಬೇಕಾಗಿಲ್ಲ.

ಅಧಿಕಪ್ರಸಂಗಿ :—

ಜುಟ್ಟಿನಿಂದ ಕೂಡಿದ ಕಪ್ಪುಬಣ್ಣದ ಟೋಪನ್. ರೇಷ್ಮೆಯ ಧೋತರ. ಹೊದೆಯಲು ಪಂಡಿತರಶಾಲು. ಕಿವಿಗೆ ಬಂಗಾರದ ಆಭರಣ. ಕೊರಳಲ್ಲಿ ತುಳಸೀಮಣಿಯ ಹಾರಗಳು, ಕೈಗೆ ಕಂಕಣ. ಕೈಯಲ್ಲಿ ಹಳೆಯ ಕಾಲದ ಪಂಡಿತರ ಕೋಲು. ವಯಸ್ಸು ಸುಮಾರು 50 ವರ್ಷ. ಇವನು ಅಹಂಕಾರವನ್ನು ತೋರಿಸುವ ವ್ಯಕ್ತಿ. ಉತ್ತಮರನ್ನು ಅಡಿಕೊಳ್ಳುವುದೇ ಇವನ ಕರ್ತವ್ಯ. ನಾಮಗಳು ಬೇಕಾಗಿಲ್ಲ. ಹಣೆಯಲ್ಲಿ ಗೋಪೀಚಂದನದ ಒಂದು ಉದ್ದನಾಮ. ಅದರಮೇಲೆ ಕುಂಕುಮ; ಪಂಢರಾಪುರದವರಂತೆ. ಕೃಷ್ಣಾಚಾರ್ಯರ ಪಾತ್ರ ಧರಿಸಿದ ವ್ಯಕ್ತಿಯೇ ಈ ಪಾತ್ರವನ್ನು ಧರಿಸಬಹುದು.

ನರಸಪ್ಪ, ಹನುಮಪ್ಪ, ರಾಮಣ್ಣ :—

ಈ ಮೂವರೂ ಹಳ್ಳಿಯ ಹಿರಿಯರು. ಧೋತರವನ್ನು ಮೊಳಕಾಲ ಮೇಲೆ ಕಟ್ಟಿರುವರು. ತಲೆಗೆ ಹಳ್ಳಿಯಜನರಂತೆ ವಸ್ತ್ರಗಳನ್ನು ಸುತ್ತಿರುವರು. ತಲೆಗೆ ಹಳ್ಳಿಯಜನರಂತಹ ಟೋಪಿಗಳು. ದೊಡ್ಡ-ದೊಡ್ಡ ಮೀಸೆಗಳು. ತಪ್ಪಡಿಗಳು. ಕಪಳಿಗಳು. ಮೈಮೇಲೆಹಾಕಿಕೊಳ್ಳಲು ಕಂಬಳಿಗಳು. ಒಂದಿಬ್ಬರಕೈಯಲ್ಲಿ ಕತ್ತಿಗಳು. ಕತ್ತಿಗಳಿಗೆ ಚುಚ್ಚಲ್ಪಟ್ಟ ನಿಂಬೇಹಣ್ಣುಗಳು. ಹಣೆಯಮೇಲೆ ಕುಂಕುಮ. ಗುಗ್ಗಳವನ್ನು ಕುಂಕುಮವನ್ನು ಚಲ್ಲುತ್ತಾ ಪ್ರವೇಶಿಸಬೇಕು. ಟೊಂಕಗಳಿಗೆ ಬೇವಿನ ಟೊಂಗೆಗಳನ್ನು ಕಟ್ಟಿಕೊಂಡಿರಬೇಕು. ಒಂದು ಕೋಳಿ ಕುರಿಮರಿಗಳಿರಬೇಕು. ಮೊದಲು ಸೂತ್ರಧಾರನಾಗಿ ಪ್ರವೇಶಿಸಿದ ವ್ಯಕ್ತಿಯೇ ಈ ಮೂರುಜನರ ಮಧ್ಯದಲ್ಲೊಬ್ಬರವೇಷವನ್ನು ಧರಿಸಬಹುದು. ಇವರೆಲ್ಲರ ವಯಸ್ಸು 30, 40, 50 ರಂತೆ ಇರಬೇಕು.

ಕಾವಲುಗಾರ :—

ವಯಸ್ಸು ಸುಮಾರು 40 ವರ್ಷ. ಕೈಯಲ್ಲಿ ಕತ್ತಿ, ಡಾಲು, ಅಥವಾ ಶೂಲ ಇರಬೇಕು. ಸೈನಿಕನ ವೇಷಧರಿಸಿದ್ದರೆ ಸಾಕು. ನಾಮದ ಅವಶ್ಯಕತೆಯಿಲ್ಲ.

ವೆಂಕಟರಮಣ :—

ಶ್ರೀಮನ್ನಾರಾಯಣನ ವೇಷದಂತಿರಬೇಕು. ಹಣೆಯಲ್ಲಿಮಾತ್ರ ವೆಂಕಟರಮಣನಿಗೆ ಇರುವಂತೆ ಮೂರುನಾಮಗಳಿರಬೇಕು.

ವಿ. ಸೂ :—

ನಾಲ್ಕನೇಅಂಕದಲ್ಲಿ ಬರುವ ಅನ್ನಮಾಚಾರ್ಯರ ಪಾತ್ರಪ್ರವೇಶವನ್ನು ಅನುಕೂಲ ವಿದ್ದವರು ಉಪಯೋಗಿಸಿ ಕೊಳ್ಳಬಹುದು. ಆಗ ಆ ಪಾತ್ರವನ್ನು ಎರಡನೇ ಅಂಕದಲ್ಲಿ ವೃದ್ಧ ಬ್ರಾಹ್ಮಣನ ವೇಷಧರಿಸಿದ ವ್ಯಕ್ತಿಯೇ ಧರಿಸಬಹುದು. ಅನ್ನಮಾಚಾರ್ಯರ ವೇಷವನ್ನು ಧರಿಸಿದ ವ್ಯಕ್ತಿ 90 ವರ್ಷದವನಂತಿರಬೇಕು. ಬಿಳಿಯ ಕೂದಲು ಬಿಳಿಯಗಡ್ಡ, ಬಿಳಿಯಧೋತರವನ್ನು ಉಟ್ಟು, ಬಿಳಿಯ ವಸ್ತ್ರವನ್ನು ಹೊದ್ದಿರಬೇಕು. ಕೊರಳಲ್ಲಿ ತುಳಸೀಮಣಿಯ ಮಾಲೆಗಳನ್ನು ಧರಿಸಿರಬೇಕು. ಹಣೆಯ ಮೇಲೆ ವೆಂಕಟರಮಣನಂತೆ ಮೂರುನಾಮಗಳನ್ನು ಧರಿಸಿರಬೇಕು. ಈ ದೃಶ್ಯವನ್ನು ಬಿಡುವ ಪಕ್ಷದಲ್ಲಿ ಪುರಂದರದಾಸರು "ಪವಡಿಸು ಪರಮಾತ್ಮನೆ ಯಾವದೇವರಿಗುಂಟು?" ಎಂಬುವ ವರೆಗೆಹೇಳಿ, ನೆಲದ ಮೇಲೆ ವಸ್ತ್ರಹಾಕಿ, ಮಲಗಲು ಸಿದ್ಧರಾಗುವಂತೆ ಅಭಿನಯಿಸಿದರೆ ಸಾಕು. ಇದರಂತೆ ಇದೇ ಅಂಕದ ಕೊನೆಯಲ್ಲಿ ಬರುವ ಶ್ರೀನಿವಾಸನ (ವೆಂಕಟರಮಣನ) ಪಾತ್ರ ಪ್ರವೇಶವನ್ನು ಸಹ ತೆಗೆದು ಹಿನ್ನೆಲೆಯಿಂದ ಆ ಮಾತುಗಳನ್ನು ಹೇಳಿಸಬಹುದು.

— —



ದಾಸರ ವೇಷ, ಈ ಚಿತ್ರದಲ್ಲಿರುವಂತೆ ಇರಬೇಕು. ಶ್ರೀನಿವಾಸನಾಯಕ, ಬ್ರಾಹ್ಮ
ಬ್ರಾಹ್ಮಣನಮಗ, ವರದ, ರಾಮಾಚಾರ್ಯ ಇವರೆಲ್ಲರ ನಾಮಗಳು ಸಹ,
ಚಿತ್ರದಲ್ಲಿದ್ದಂತೆ ಇರಬೇಕು.

ಶ್ರೀ ಗುರುಭ್ಯೋ ನಮಃ

# ಭಕ್ತ ಪುರಂದರದಾಸರು

(ನಾಟಕ)

## ನಾಂದಿ

ರಾಗ–ಮುಖಾರಿ ತಾಳ–ಛಾಪು

ಶ್ರೀಪತಿಯು ನಮಗೆ ಸಂಪದವೀಯಲಿ ವಾ–
ಣೀಪತಿಯು ನಮಗೆ ದೀರ್ಘಾಯು ಕೊಡಲಿ ॥ ಪ ॥

ವರ ವಿಬುಧರನು ಪೊರೆಯೆ ವಿಷವ ಕಂಠದಲಿಟ್ಟ।
ಹರ ನಿತ್ಯ ನಮಗೆ ಸಹಾಯಕನಾಗಲಿ।
ನರರೊಳುನ್ನತವಾದ ನಿತ್ಯಭೋಗಂಗಳನು।
ಪುರುಹೂತ ಪೂರ್ಣಮಾಡಿಸಲಿ ನಮಗೆ ॥ 1 ॥

ವಿನುತಸಿದ್ಧಿಪ್ರದನು ವಿಘ್ನೇಶ ನಯದಿಂದ।
ನೆನೆದ ಕಾರ್ಯಗಳೆಲ್ಲ ನೆರವೇರಿಸಲಿ।
ದಿನ ದಿನದಿ ಧನ್ವಂತ್ರಿ ಆಪತ್ತುಗಳ ಕಳೆದು
ಮನ ಹರುಷವಿತ್ತು ಮನ್ನಿಸಲಿ ಬಿಡದೆ ॥ 2 ॥

ನಿರುತ ಸುಜ್ಞಾನವನು ಈವ ಮಧ್ವರಾಯ
ಗುರುಗಳಾಶೀರ್ವಾದ ನಮಗಾಗಲಿ।
ಪುರಂದರವಿಠಲನ್ನ ಕರುಣದಿಂದಲಿ ಸಕಲ
ಸುರರೊಲುಮೆ ನಮಗೆ ಸುಸ್ಥಿರವಾಗಲಿ ॥ 3 ॥

## ಪ್ರಸ್ತಾವನೆ

(ತೆರೆ ಏಳುವುದು)

(ನಾಂದ್ಯನಂತರದಲ್ಲಿ ನಟಿ ಪ್ರವೇಶಿಸಿ, ಈ ಕೆಳಕಂಡ ಹಾಡನ್ನು ಹೇಳುತ್ತಾ ವೈ–
ಖರಿತು ನಾಟ್ಯವಾಡುವಳು.)

ರಾಗ–ಸೌರಾಷ್ಟ್ರ ತಾಳ–ಅಟ

ಯಾರೇ ಬಂದವರು ಮನೆಗೆ ಮತ್ಯಾರೇ ಬಂದವರು ॥ ಪ ॥

ನಾರಾಯಣ ಕೃಷ್ಣ ನಾಥನಲ್ಲದೆ ಬೇರೆ ॥ ಅ. ಪ. ॥

ವಜ್ರರೇಖೆಗಳಿವೆ ಮನೆಯಲ್ಲಿ ಕಾಲ
ಗೆಜ್ಜೆಯ ಧ್ವನಿ ಕೇಳಿ ಬರುತಿದೆ
ವಜ್ರ ಮಾಣಿಕ್ಯವೆಲ್ಲ ಹರಿದು ಬಿದ್ದಿವೆ
ಮಜ್ಜಿಗೆಯೊಳಗೆ ಕಾಣ್ವ ಬೆಣ್ಣೆಯ ಕಾಣೆ ॥ 1 ॥

ಕೊಂಬು ಕೊಳಲು ರಭಸಗಳಿವೆ ಕ–
ದಂಬ ಕಸ್ತೂರಿ ಪೆಂಪೆಸೆದಿವೆ
ಪೊಂಬಟ್ಟೆ ಚಲ್ಲಣ ಚೆಲ್ಲಿದೆ ಹಾಲು
ಕುಂಭ ಒಡೆದು ಮನೆ ತುಂಬ ಬೆಳ್ಳಗಾಯಿತು ॥ 2 ॥

ಮಿಂಚುಹೊಳೆದಂತೆ ಹೊಳೆಯುತ ತನ್ನ
ಸಂಚರರೊಡಗೂಡಿ ಚಲಿಸುತಲಿ
ವಂಚಿಸಿ ಬೆಣ್ಣೆಯ ಮೆಲ್ಲುವ ನಮ್ಮ
ಲಂಚಾವ ಪುರಂದರವಿಠಲನಲ್ಲದೆ ಬೇರೇ ॥ 3 ॥

(ನಟಿಯ ನೃತ್ಯವಾಗಿದ ಮೇಲೆ ಸೂತ್ರಧಾರನು ಸಂತೋಷವನ್ನು ವ್ಯಕ್ತಮಾಡುತ್ತಾ ಚಪ್ಪಾಳೆ ತಟ್ಟುತ್ತಾ ಪ್ರವೇಶಿಸುವನು.)

ಸೂತ್ರಧಾರ – ಆಹಾ!... ಆಹಾ! ಮಧುರಾತಿಮಧುರ, ನಯನಮನೋಹರ. ಆರ್ಯೇ ಎಷ್ಟು ಸುಂದರವಾಗಿ ಈ ಅಮರ ಕೃತಿಗೆ ರೂಪಕಲ್ಪನೆ ಮಾಡಿದೆ. ನಿನಗೆ ಮಂಗಳವಾಗಲಿ... ಹೌದು ಈ ಅಮಂದಾ ನಂದಕ್ಕೆ ಏನುಕಾರಣ ?

ನಟಿ – ಈ ಮಂಗಳಕೃತಿಯಲ್ಲಿರುವ ಪವಿತ್ರಮಧುರಭಾವವೇ, ನನ್ನನ್ನು ಮೈಮರೆಯುವಂತೆ ಮಾಡಿತು.

ಸೂತ್ರ – ಶ್ರೀ ಪುರಂದರದಾಸರ ಕೃತಿಗಳೆಂದರೆ ಸಾಮಾನ್ಯವೆ ? ರಾಗ–ತಾಳ–ಭಾವ–ಭಕ್ತಿತತ್ತ್ವಗಳ ಸಮ್ಮೇಳನಾತ್ಮಕವಾದ ರಸ ಝರಿಗಳು.

ನಟಿ – ಆರ್ಯ, ಈ ಪುರಂದರದಾಸರು ಯಾರು ?

ಸೂತ್ರ – ಆರ್ಯೆ,

ನಾರದೋ ವಿಷ್ಣು ಸೇವಾರ್ಥಂ ವಾಯೋರಾವೇಶತೋಽಜನಿ
ಪುರಂದರ ಇತಿ ಖ್ಯಾತೋ ತತ್ತ್ವ ಮಾರ್ಗಂ ಪ್ರದರ್ಶಯನ್ ॥

ಎಂಬ ವಚನದಂತೆ ಪುರಂದರದಾಸರು ಮೂಲತಃ ಸಾಕ್ಷಾತ್ ಬ್ರಹ್ಮಮಾನಸಪುತ್ರರಲ್ಲೊಬ್ಬರಾದ ನಾರದರೇ. ಪರಮಾತ್ಮನ

ಆಜ್ಞೆಯನ್ನು ಶಿರಸಾಧರಿಸಿ ಪಂಢರಾಪುರಕ್ಕೆ ಸಮೀಪದಲ್ಲಿರುವ ಪುರಂದರಗಡವೆಂಬ ಊರಿನಲ್ಲಿ ಸದ್ಬ್ರಾಹ್ಮಣರೂ, ಕೋಟೀಶ್ವರರೂ ಆದ ವರದಪ್ಪನಾಯಕರ ಮಗನಾಗಿ ಶ್ರೀನಿವಾಸ ನಾಯಕರೆಂಬ ಹೆಸರಿನಿಂದ ಜನಿಸಿದರು. ಯೌವನದಲ್ಲಿ ಮಹಾ ಲೋಭಿಗಳಾಗಿ ಲಕ್ಷ್ಮಿಯನ್ನು ತಮ್ಮ ಮನೆಯಲ್ಲಿಯೇ ಕಟ್ಟಿ ಹಾಕಿದರು.

ನಟಿ – ಅಷ್ಟು ಲೋಭಿಗಳೇ ! ಅದೇಕೆ ಹಾಗಾಯಿತು ? ವಿಚಿತ್ರವಾಗಿದೆ ಯಲ್ಲ !

ಸೂತ್ರ – ಅದೇ ವಿಚಿತ್ರ ! ಜ್ಞಾನಿಗಳ ಅವತಾರದ ಮರ್ಮ ತಿಳಿಯುವುದು ಅಷ್ಟು ಸುಲಭವಲ್ಲ. ಆರ್ಯೆ ! ಆ ಪರಮಾತ್ಮನ ಸಂಕಲ್ಪ ಘಟನೆಗಳು ಬಹು ವಿಚಿತ್ರ. ಇಂಥಾ ಲೋಭಿಗಳಾದ ನಾಯಕರಿಗೆ ದಾನಧರ್ಮಗಳಲ್ಲಿ ಆಸಕ್ತಿಯುಳ್ಳ ಸಾಧ್ವೀಲಲಾಮಳನ್ನು ಸಹ ಧರ್ಮಚಾರಿಣಿಯನ್ನಾಗಿ ಮಾಡಿ, ಆ ಹರಿ ತನ್ನ ನಾಟಕಕ್ಕೆ ನಾಂದೀಪ್ರಸ್ತಾವನೆಯನ್ನು ನಿರ್ಮಾಣಮಾಡಿಕೊಂಡ. ಆರ್ಯೆ! ಅಂದು ವಾಮನನಾಗಿ ಬಂದು ಬಲಿಯನ್ನು ಯಾಚಿಸಿದಂತೆ, ಆ ಕರುಣಾಮಯ ವೃದ್ಧ ಬ್ರಾಹ್ಮಣ ವೇಷದಲ್ಲಿ, ಬ್ರಹ್ಮನನ್ನು ಮಗನನ್ನಾಗಿ ಮಾಡಿಕೊಂಡು, ಉಪನಯನವ್ಯಾಜದಿಂದ ಶ್ರೀನಿವಾಸನಾಯಕರ ಹತ್ತಿರ ಬಂದು ಕೈಚಾಚಿ ಯಾಚಿಸಿದ.

ನಟಿ – ಆಹಾ!... ಆರ್ಯ! ನೀವು ಆ ಉತ್ತಮೋದಂತವನ್ನು ಹೇಳು ತ್ತಿದ್ದರೇನೇ ಮೈರೋಮಾಂಚಿತವಾಗುತ್ತಿದೆ! ಆರ್ಯ! ನನ್ನ ದೊಂದು ಚಿಕ್ಕ ವಿಜ್ಞಾಪನೆ.

ಸೂತ್ರ – ಏನದು ? ಆರ್ಯೆ ?

ನಟಿ – ಈ ಕಥೆಯನ್ನು ನಾವು ನಾಟಕರೂಪದಲ್ಲಿ ಏಕೆ ಪ್ರದರ್ಶಿಸ ಬಾರದು. ಬಂದ ಸಹೃದಯವೃಂದವೂ ಸಹ ಆನಂದಿಸುವುದಲ್ಲ ?

ಸೂತ್ರ – ಆರ್ಯೆ, ನೀನು ಹೇಳಿದುದು ಬಹುಯುಕ್ತ. ನಮ್ಮ ನಟರು ಸಹ ಈ ಪ್ರಯೋಗದಲ್ಲಿ ಈಗಾಗಲೆ ಚೆನ್ನಾಗಿ ನುರಿತವರಾಗಿದ್ದಾರೆ. ಇಂದಿನ ದಿನವೇ ಸುದಿನ. ಭಕ್ತಿಯನ್ನು ಬೆಳೆಸಿ ಆಧ್ಯಾತ್ಮಿಕ ಚಿಂತನೆಯನ್ನು ತಂದೊಡ್ಡುವ, ಆ ಮಹಿತಾತ್ಮರ ಚರಿತ್ರೆಯನ್ನು ಇಂದೇ ಪ್ರದರ್ಶಿಸಿ ಜನ್ಮಗಳನ್ನು ಸಾರ್ಥಕ ಮಾಡಿಕೊಳ್ಳುವ. (ಹಿನ್ನೆಲೆಯಿಂದ "ಮಂಗಳಂ ಶ್ರೀ ತುಳಸೀದೇವಿಗೆ" ಎಂಬ ಹಾಡು ಕೇಳಿಸುವುದು. ನಟಿ ಹಿನ್ನೆಲೆಯತ್ತ ನೋಡುತ್ತಾ)

ನಟಿ – ಏನು! ನಾಟಕವೇ ಪ್ರಾರಂಭವಾಗಿಲ್ಲ ಆಗಲೇ ನಮ್ಮ ಕುಶೀಲವರು ಮಂಗಳ ಹಾಡುತ್ತಿದ್ದಾರೆಯೇ ?

ಸೂತ್ರ – (ನೇಪಥ್ಯದ ಕಡೆ ನೋಡಿ) ಅದು ನಮ್ಮ ಕುಶೀಲವರ ಮಂಗಳ ಕಾರ್ಯಕ್ರಮವಲ್ಲ. ಅದೋ ಶ್ರೀನಿವಾಸನಾಯಕರ ಸಹಧರ್ಮ ಚಾರಿಣಿ ಶ್ರೀ ತುಳಸೀದೇವಿಗೆ ಆರತಿಯನ್ನು ಬೆಳಗುತ್ತಿರುವಳು. ನಡೆ ಹೋರಡೋಣ.

ನಟಿ – ನಡೆಯಿರಿ.
(ಇಬ್ಬರೂ ನಿಷ್ಕ್ರಮಿಸುವರು)

॥ ಪ್ರಸ್ತಾವನೆ ಸಮಾಪ್ತಿಯಾಯಿತು ॥

---

# ಪ್ರಥಮಾಂಕ

ತೆರೆ ಏಳುವುದು.

(ರಂಗಸ್ಥಳ: ಶ್ರೀನಿವಾಸನಾಯಕರ ಮನೆಯ ಒಂದು ಭಾಗವಾದ ಪಡಸಾಲೆ. ಅಲ್ಲಲ್ಲಿ ದೇವರ ಪಟಗಳು ಇವೆ. ರಂಗಸ್ಥಳದ ಮಧ್ಯದಲ್ಲಿ ಒಂದು ಪೀಠದಲ್ಲಿ ಸರ್ವಾಲಂಕಾರಭರಿತವಾದ ತುಳಸೀ ಬೃಂದಾವನ ಇಡಲಾಗಿದೆ. ಎರಡು ಪಕ್ಕದಲ್ಲಿ ದೀಪಗಳು, ಒಂದು ತಟ್ಟೆಯಲ್ಲಿ ಆರತಿಗಾಗಿ ಎರಡು ಸಣ್ಣ ದೀಪಗಳು, ಮತ್ತೊಂದು ತಟ್ಟೆಯಲ್ಲಿ ಹಣ್ಣು, ಹೂವು, ಅಕ್ಷತೆಕಾಳುಗಳು ಇವೆ. ಮತ್ತೊಂದು ಪಕ್ಕದಲ್ಲಿ ಕೂಡಲು ಹಾಸಿಗೆ, ತಲೆದಿಂಬು, ಲೆಕ್ಕ ಬರೆದುಕೊಳ್ಳಲು ಒಂದು ಪೀಠ, ಅದರ ಮೇಲೆ ಕೆಲವು ಲೆಕ್ಕದ ಪುಸ್ತಕಗಳು, ಒಂದು ಸೀಸದಲ್ಲಿ ದ್ರಾವಕ ಇಡಲಾಗಿದೆ. ಸರಸ್ವತೀಬಾಯಿಯವರು ತುಳಸಿಗೆ ಅಕ್ಷತೆ ಕಾಳುಗಳನ್ನು ಹಾಕಿ ಮಂಗಳದ ಹಾಡು ಹೇಳುತ್ತಾ ಆರತಿ ಮಾಡುವರು.)

ತಿ — ರಾಗ–ನಾದನಾಮಕ್ರಿಯೆ ತಾಳ–ಛಾಪು

ಮಂಗಳಂ ಶ್ರೀ ತುಳಸೀದೇವಿಗೆ ಜಯ–
ಮಂಗಳಂ ವೃಂದಾವನ ದೇವಿಗೇ ॥ ಪ ॥

ನೋಡಿದ ಮಾತ್ರಕ್ಕೆ ದೋಷ ಸಂಹಾರಿಗೆ।
ಬೇಡಿದ ವರಗಳ ಕೊಡುವವಳಿಗೆ
ಮಾಡಿ ವಂದನೆಯನು ಮನುಜರಪಾಪದ
ಗೂಢ ನೀಡಾಡುವ ಗುಣವಂತೆಗೆ ॥ 1 ॥

ಮುಟ್ಟಿದ ಮಾತ್ರಕ್ಕೆ ಮುಕ್ತರ ಮಾಡುವ
ಮುದದಿಂದುದ್ಧರಿಸುವ ಮುನಿವಂದ್ಯಗೆ
ಕೊಟ್ಟರೇ ನೀರನು ಬೇರಿಗೇ ಕಾಲನ
ಮುಟ್ಟಲೀಸದ ಹಾಗೆ ಮಾಳ್ಪಳಿಗೆ ॥ 2 ॥

ಸರಸಿಜನಾಭನ ಸಲಿಗೆಯ ರಾಣಿಗೆ
ಶರಣ ಜನರ ಪೊರೆವ ಸದ್ಗುಣಿಗೆ
ತಿರುಪತಿನಿಲಯ ಶ್ರೀ ಪುರಂದರವಿಠಲನ
ಚರಣ ಸೇವಕಳಾದ ಚಿನ್ಮಯಿಗೆ ॥ 3 ॥

ದು ಹಾಡಿ, ಆರತಿಯನ್ನು ಮಾಡಿ, ತಟ್ಟೆಯನ್ನು ಕೆಳಗಿಟ್ಟು, ಅಕ್ಷತೆಯನ್ನು ಹಾಕಿ
ುಗಿದು–)

ಯಾದೃಷ್ಟಾ ನಿಖಿಳಾಘಸಂಘಶಮನೀ—
ಸ್ಪೃಷ್ಟಾ ವಪುಃ ಪಾವನೀ
ರೋಗಾಣಾಮಭಿವಂದಿತಾ ನಿರಸನೀ
ಸಿಕ್ತಾಂತಕ ತ್ರಾಸಿನೀ
ಪ್ರತ್ಯಾಸತ್ತಿ ವಿಧಾಯಿನೀ ಭಗವತಃ
ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ
ತಸ್ಯೈ ತುಲಸ್ಯೈ ನಮಃ ॥

ತುಲಸೀ ಶ್ರೀಸಖೀ ಶುಭೇ ಪಾಪಹಾರಿಣೀ ಪುಣ್ಯದೇ
ನಮಸ್ತೇ ನಾರದನುತೇ ನಾರಾಯಣ ಮನಃ ಪ್ರಿಯೇ

(ಎಂದು ಹೇಳಿ, ಹೂವನ್ನು ಹಾಕಿ, ನಮಸ್ಕಾರ ಮಾಡಿ, ಈ ಕೆಳಕಂಡ ಮಂತ್ರಗಳನ್ನು ಹೇಳುತ್ತಾ, ತುಲಸೀಬೃಂದಾವನಕ್ಕೆ ಪ್ರದಕ್ಷಿಣೆಮಾಡುವಳು.)

ಯಾನಿಕಾನಿಚ ಪಾಪಾನಿ ಜನ್ಮಾಂತರ ಕೃತಾನಿಚ
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇಪದೇ ॥

ಅಪರಾಧಸಹಸ್ರಾಣಿ ಕ್ರಿಯಂತೇ ಅಹರ್ನಿಶಂ ಮಯಾ
ತಾನಿ ಸರ್ವಾಣಿ ಮೇ ದೇವೀ ಕ್ಷಮಸ್ವ ಹರಿವಲ್ಲಭೇ ॥

(ಕೈಯಲ್ಲಿ ನೀರು ಹಾಕಿಕೊಂಡು ಸಮಾಪ್ತಿ ಮಾಡುತ್ತಾ)

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾತ್
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

(ಎಂದು ಹೇಳುತ್ತಾ, ಕೈಯಲ್ಲಿನ ನೀರನ್ನು ತಟ್ಟೆಯಲ್ಲಿ ಹಾಕಿ ಏಳುವಳು. ಇಷ್ಟರಲ್ಲಿ ಕೋಪದಿಂದ ಶ್ರೀನಿವಾಸನಾಯಕರು ಅಲ್ಲಿಗೆ ಬರುವರು.)

ಶ್ರೀನಿವಾಸನಾಯಕ—(ಘಟ್ಟಿಯಾಗಿ) ಸರಸ್ವತೀ... ಸರಸ್ವತೀ... [ಸರಸ್ವತಿ ಎದ್ದು ಬಂದು ನಾಯಕರ ಕೈಯಲ್ಲಿ ಅಕ್ಷತೆಕಾಳನ್ನು ಹಾಕಿ]

ಸರಸ್ವತಿ — ಸರಿಯಾದ ಸಮಯಕ್ಕೆ ಬಂದಿರಿ, ನನ್ನನ್ನಾಶೀರ್ವದಿಸಿರಿ.

ನಾಯಕ — (ದೃಷ್ಟಿಸಿ ನೋಡುತ್ತಾ) ಏನು ಇನ್ನೂ ಹೇರಳವಾಗಿ ದಾನಧರ್ಮಗಳನ್ನು ಮಾಡುವವಳಾಗು ಎಂದು ಆಶೀರ್ವದಿಸಬೇಕೆ?

ಸರಸ್ವತಿ – ನಿಮ್ಮ ಅಪ್ಪಣೆ ಪಡೆದೇ ಈ ವ್ರತ ಮಾಡಿದೆನಲ್ಲ !

ನಾಯಕ – ಆ... ಆ... ನನ್ನ ಅಪ್ಪಣೆ ಪಡೆದೇ ಮಾಡಿದ್ದಿ. ಏನೋ ಏಳು ದಿನ ತುಳಸೀ ಪೂಜೆ ಮಾತ್ರವಲ್ಲ, ಏನು ಮಹಾಖರ್ಚು ಎಂದರೆ, ನಿತ್ಯವೂ ದಂಪತಿಗಳ ಪೂಜೆ, ದಾನ, ಧರ್ಮ ಒಂದೇ ಎರಡೇ. ಇಂಥಾ ವ್ರತ ನಾಲ್ಕುಸಲ ಮಾಡಿದರೆ ಸಾಕು, ಹೊರಡುವುದೇ ಮನೆಬಿಟ್ಟು ಜೋಳಿಗೆ ಹಿಡಿದುಕೊಂಡು.

ಸರಸ್ವತಿ – ಏಕೆ ಹಾಗೆನ್ನುತ್ತೀರಿ ? ದೇವರು ಕೊಟ್ಟಾಗ ಕೊಡದೇ ಇದ್ದರೆ ಇಲ್ಲದೇ ಇದ್ದಾಗ ಕೊಡಲಾಗುತ್ತದೆಯೇ ?

ನಾಯಕ – ಇದರಲ್ಲಿ ದೇವರು ಕೊಡುವುದು ಏನು ಬಂತು? ನನ್ನ ತಾತ ಮುತ್ತಾತಂದಿರು, ನಮ್ಮ ತಂದೆಯವರು, ನಾನು ರಾತ್ರಿಹಗಲೆನ್ನದೆ ಶ್ರಮಿಸಿ ಈ ಆಸ್ತಿಯನ್ನು ಸಂಪಾದಿಸಿದ್ದೇವೆ.

ಸರಸ್ವತಿ – ಹಾಗೆನ್ನಬೇಡಿ; ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು ಪರರಿಗೆ ಅಲ್ಲವೆ ! ದಾನಧರ್ಮಗಳಿಗೆ ಉಪಯೋಗವಾಗದ ಧನ ಎಷ್ಟಿದ್ದರೂ ವ್ಯರ್ಥ. ಈಗ ಮಾಡಿದ ಧರ್ಮವೇ ಮುಂದಿನಗತಿಗೆ ಕೈಬುತ್ತಿಯಾಗುವುದು. ಇದು ಸಾಧುಸಜ್ಜನರ ಸದ್ವಾಕ್ಯ ಸ್ವಾಮಿ.

ನಾಯಕ – ಇದೆಲ್ಲಾ ಸಂಪಾದನೆ ಮಾಡಲು ಶಕ್ತಿಯಿಲ್ಲದ ವ್ಯಕ್ತಿಗಳು ಹೇಳುವ ಮಾತು. ನೋಡು ಸರಸ್ವತೀ, ಈ ಪ್ರಪಂಚದಲ್ಲಿ ದುಡ್ಡಿದ್ದವನೇ ದೊಡ್ಡಪ್ಪ; ಕಷ್ಟಪಟ್ಟು ಸಂಪಾದಿಸಿದವನಿಗೆ ತಿಳಿಯುತ್ತದೆ ಈ ಹಣದ ಹಿರಿಮೆ.

ಸರಸ್ವತಿ – ತಮಗೆ ಹೇಳಲು ನಾನು ಶಕ್ತಳಲ್ಲ. ನಾವು ನಂಬಿದ ಈ ಧನವು ನಮ್ಮ ಹಿಂದೆ ಬರಲಾರದು; ನಮ್ಮನ್ನು ಕಾಯಲಾರದು. ಇಹ ಪರದ ಸುಖಕ್ಕೆ ಶ್ರೀಹರಿಕೃಪೆಯೇ ಮುಖ್ಯಕಾರಣ. ಬಲಿ ಚಕ್ರವರ್ತಿ ತನ್ನ ಸಮಸ್ತ ಸಂಪತ್ತನ್ನು ಆ ಪರಮಾತ್ಮನಿಗರ್ಪಿಸಿ ಶಾಶ್ವತವಾದ ಕೀರ್ತಿಯನ್ನು ಪಡೆದನು.

ನಾಯಕ – ಊಂ... ಮುಗಿಯಿತೇ ನಿನ್ನ ಉಪದೇಶ ? ಸರಸ್ವತೀ, ಪುರಾಣ ಹೇಳುವುದಕ್ಕೇನು ನಾನೂ ಹೇಳುತ್ತೇನೆ. ಅಂಗಡಿಯಿಂದ ಪದಾರ್ಥ ತರುವವನಿಗೆ ಗೊತ್ತಾಗುತ್ತದೆ ಅದರ ಕಷ್ಟ; ತಿಂದು ತೇಗುವವರಿಗೆ ಆ ಕಷ್ಟ ನೋವುಗಳ ಅರಿವು ಹೇಗೆ ಆಗಬೇಕು.

ಸರಸ್ವತಿ – ಹಾಗಲ್ಲ...... ನೀವು......

ನಾಯಕ – ಸರಸ್ವತೀ, ಇನ್ನು ಸಾಕು. ನೀನು ನನಗೆ ಉಪದೇಶ ಮಾಡ ಬೇಕಾಗಿಲ್ಲ. ಇಲ್ಲಿಯತನಕ ಹೊರಗೆ ಮಾತ್ರ ಉಪದೇಶಕರಿದ್ದಾರೆ ಎಂದು ತಿಳಿದಿದ್ದೆ. ಈಗ ಮನೆಯಲ್ಲಿ ನೀನೊಬ್ಬಳು ನನಗೆ ಉಪದೇಶಕಳಾದಿ. ಅಂತಾಗಿ ಹೋದರೆ ಸಾಕು ಆ ವೃದ್ಧ ಬ್ರಾಹ್ಮಣನ ಉಪದೇಶ.

ಸರಸ್ವತಿ – ಯಾರು ? ವೃದ್ಧಬ್ರಾಹ್ಮಣರೇ ! ಆ ಮಹಾನುಭಾವರು ಯಾರು ಸ್ವಾಮಿ ?

ನಾಯಕ – ಏಕೆ ಕರೆತಂದು ಇಲ್ಲೇ ಕೂಡಿಸಿಕೊಂಡು ಸಕಲ ಮರ್ಯಾದೆ ಗಳನ್ನೂ ಮಾಡಿ ನನಗುಪದೇಶ ಮಾಡಿಸುತ್ತೀಯಾ ?

ಸರಸ್ವತಿ – ಹುಂ... ಆ ಭಾಗ್ಯ ನನಗೆ ಈ ಜನ್ಮದಲ್ಲಿ ಇದೆಯೇ ?

ನಾಯಕ – ಏನೋ... ನೋಡಿದರೆ ಸ್ವಲ್ಪೇ ದಿನಗಳಲ್ಲೇ ನನ್ನನ್ನು ದಾಸ ನನ್ನಾಗಿ ಮಾಡುವಂತಿದ್ದೀಯಾ. ಸರಿ...ಸರಿ... ಆ ಭೀಮಣ್ಣ ಬಡ್ಡಿ ಬಾಬತು ಏನಾದರೂ ತಂದು ಕೊಟ್ಟನೇನು ?

ಸರಸ್ವತಿ – ಹೌದು ತಂದು ಕೊಟ್ಟಿದ್ದಾನೆ; ಕೊಡಲೇ ?

ನಾಯಕ – ಉ..., ಉ...

(ಸರಸ್ವತಿಬಾಯಿಯವರು ಒಳಗೆ ಹೋಗಿ ದುಡ್ಡಿನ ಚೀಲವನ್ನು ತಂದು ಕೊಡುವರು. ನಾಯಕರು ಚೀಲವನ್ನು ಬಿಚ್ಚಿ ದುಡ್ಡನ್ನು ಒಂದುಸಲ ಲೆಕ್ಕ ಹಾಕುವರು. ಸರಸ್ವತೀಬಾಯಿಯವರು ಭಯಪಡುತ್ತಾ ಸಂಕೋಚದಿಂದ)

ಸರಸ್ವತಿ – ಸ್ವಾಮಿ,

ನಾಯಕ – ಏನು ?...

ಸರಸ್ವತಿ – ಪಾಪ! ಭೀಮಣ್ಣ ಬಹಳ ಕಷ್ಟದಲ್ಲಿದ್ದಾನಂತೆ. ಮನೆಯಲ್ಲಿ ಹೆಂಡತಿಗೂ ಅನಾರೋಗ್ಯ. ಈ ಪರಿಸ್ಥಿತಿಯಲ್ಲಿ ನೀವು ಹಾಕಿದ ಬಡ್ಡಿ ಬಹು ಭಾರ ಅಲ್ಲವೆ ? ಆದಕಾರಣ–

ನಾಯಕ – ಆದಕಾರಣ ?

ಸರಸ್ವತಿ – ಬಡ್ಡಿ ಸ್ವಲ್ಪ ಕಮ್ಮಿ ಮಾಡಿದರೆ.........

ನಾಯಕ – ಓಹೋ, ಅವನು ನಿನ್ನ ಮೂಲಕ ನ್ಯಾಯಪಂಚಾಯತಿ ಮಾಡುತ್ತಾ ಇದ್ದಾನೆಯೇ ?

ಸರಸ್ವತಿ – ಅಯ್ಯೋ, ಹಾಗೇನಿಲ್ಲ. ಆ ಪ್ರಾಣಿ ಒಂದೂ ಮಾತಾಡಿಲ್ಲ. ಅವನ ಕಷ್ಟ ಕಂಡು ನೋಡಲಾರದೆ ನಾನೇ ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದೇನೆ. ಕಷ್ಟದಲ್ಲಿದ್ದವರಿಗೆ ಪುನಃ ಕಷ್ಟ ಕೊಡುವುದು ನ್ಯಾಯವೇ ?

ನಾಯಕ – (ಕೋಪದಿಂದ ಘಟ್ಟಿಯಾಗಿ) ಸರಸ್ವತೀ..., ನಿನ್ನ ಸಹಾನು ಭೂತಿ, ಸಲಹೆಗಳು ನನಗೆ ಬೇಕಾಗಿಲ್ಲ. ಇನ್ನು ಮುಂದೆ ವ್ಯಾಪಾರದ ವಿಷಯದಲ್ಲಿ ಮಾತ್ರ ತಲೆ ಹಾಕಲು ಪ್ರಯತ್ನ ಮಾಡಬೇಡ; ಅಧಿಕಪ್ರಸಂಗ ಸಾಕು

ಸರಸ್ವತಿ ನನ್ನ ಮಾತಿನಿಂದ ನಿಮಗೆ ನೋವಾಗಿದ್ದರೆ ಕ್ಷಮಿಸಿ.

(ಎಂದು ಹೇಳಿ ಒಳಗೆ ಹೋಗುವಳು. ನಾಯಕರು ಮತ್ತೊಂದು ಸಲ ದುಡ್ಡನ್ನು ಎಣಿಸುವರು. ಇಷ್ಟರಲ್ಲಿ ಸರಸ್ವತೀಬಾಯಿ ಯವರು ಬಿಂದಿಗೆಯನ್ನು ತೆಗೆದುಕೊಂಡು ಬಂದು)

ಸರಸ್ವತಿ – ಸ್ವಾಮಿ, ನಾನು ಕೆರೆಗೆ ಹೋಗಿ ಕುಡಿಯಲು ನೀರು ತೆಗೆದು ಕೊಂಡು ಬರುತ್ತೇನೆ.

ನಾಯಕ – ಸರಿ, ಸರಿ.

(ನಾಯಕರು ಪುನಃ ದುಡ್ಡನ್ನು ಲೆಕ್ಕ ಹಾಕುತ್ತಾ ನಿಲ್ಲುವರು. ಇಷ್ಟರಲ್ಲಿ ಬ್ರಾಹ್ಮಣ ವೇಷಧಾರಿಯಾದ ಶ್ರೀಹರಿ, ಬ್ರಹ್ಮನನ್ನು 8 ವರ್ಷದ ಮಗನನ್ನಾಗಿ ಮಾಡಿಕೊಂಡು ಮೆಲ್ಲನೆ ಒಳಗೆ ಪ್ರವೇಶಿಸಿ,)

ಬ್ರಾಹ್ಮಣ – ಶ್ರೀನಿವಾಸನಾಯಕರಿಗೆ ಆಶೀರ್ವಾದಗಳು.

ಶತಮಾನಂಭವತಿ ಶತಾಯುಃ......

ನಾಯಕ – (ಕೋಪವನ್ನು ತೋರುತ್ತಾ) ಆಂ ಆಂ.. ಏನಯ್ಯಾ ಬ್ರಾಹ್ಮಣ, ಕೊನೆಗೆ ಮನೆಯೊಳಗೇ ಬಂದುಬಿಟ್ಟೆಯಲ್ಲಾ ! ಎಷ್ಟು ಬಲವಂತಿಕೆ ನಿನ್ನದು ! ಹೇಳದೆ ಕೇಳದೆ ನೇರವಾಗಿ ಒಳಗೇ ಬಂದುಬಿಡುವುದೇ ?

ಬ್ರಾಹ್ಮಣ – (ಮುಗುಳ್ನಗೆ ನಗುತ್ತಾ ಶಾಂತವಾಗಿ) ಅದೇನು ನಾಯಕರೇ, ನಾನು ಬರಬೇಕಾದ ಸ್ಥಳಕ್ಕೆ ಬಂದಿದ್ದೇನೆ.

ನಾಯಕ – ಏನು ! ಇದು ! ನೀನು ಬರಬೇಕಾದ ಸ್ಥಳವೇ !

ಬ್ರಾಹ್ಮಣ – ಅಲ್ಲವೆ? ಅಪಾರ್ಥ ಮಾಡಿಕೊಳ್ಳಬೇಡಿ. ಸ್ವಲ್ಪ ಆಲೋಚನೆ ಮಾಡಿನೋಡಿ. ಬ್ರಾಹ್ಮಣರಿಗೆ ಯಜಮಾನರಾದವರು ಸ್ವಾಗತ ಬಯಸಿ, ಉತ್ತಮ ಸ್ಥಳದಲ್ಲಿ ಕೂಡಿಸಿ, ಪೂಜಿಸಿ, ದಾನಮಾಡ ಬೇಕಲ್ಲವೆ? ನನ್ನನ್ನು ಹೊರಗಿನಿಂದ ಇಲ್ಲಿಗೆ ಕರೆತಂದು ಗೌರವಿಸುವ ಶ್ರಮ ನಿಮಗೇಕೆಂದು ನಾನೇ ನೇರವಾಗಿ ಒಳಗೆ ಬಂದೆ. ಇದು ತಪ್ಪೇ?

ಬ್ರಾ–ಮಗ – ತಪ್ಪೇನಿಲ್ಲ, ಎಲ್ಲಾ ಒಪ್ಪೇ.

ನಾಯಕ – ಒಳ್ಳೇ ಬ್ರಾಹ್ಮಣನಯ್ಯ ನೀನು! ಚಮತ್ಕಾರವಾದ ಮಾತು ಜೇರೆ. ನಾನೊಂದು ಮಾತು ಕೇಳುತ್ತೇನೆ; ಇಲ್ಲಿಗೆ ಆರು ತಿಂಗಳಿಂದ ರಾತ್ರಿಹಗಲೆನ್ನದೆ ನನ್ನ ಸುತ್ತೂ ತಿರುಗುತ್ತಾ ಇದ್ದೀಯಲ್ಲ, ನಿನಗೆ ಬೇಸರಿಕೆ ಆಸರಿಕೆಗಳಿಲ್ಲವೇ?

ಬ್ರಾಹ್ಮಣ – ಇಲ್ಲ ನಾಯಕರೇ; ನನಗೆ ಆಸರಿಕೆ, ಬೇಸರಿಕೆಗಳು ಇಲ್ಲವೇ ಇಲ್ಲ. ನನ್ನವರ ಸುತ್ತಲೂ ತಿರುಗುವುದಕ್ಕೂ,ಯಾಚಿಸುವುದಕ್ಕೂ ನಾನು ಎಂದೂ ಬೇಸರಿಸುವ್ಪದಿಲ್ಲ. ನೀವೂ ನನ್ನವರು ತಾನೆ! ಹೌದಲ್ಲೇನಪ್ಪಾ?

ಬ್ರಾ–ಮಗ – ಹೌದಪ್ಪ.

ನಾಯಕ – ಏನು!! ನಾನು ನಿನ್ನವನೇ? ಇದು ಎಂದಿನಿಂದ?

ಬ್ರಾಹ್ಮಣ – ನೀವು ಬಾ ಎಂದು ಕರೆದಂದಿನಿಂದ.

ನಾಯಕ – ಆ!! ನಾನು ನಿನ್ನನ್ನು ಬಾ ಎಂದೆನೆ? ಕಂಡಾಗಲೆಲ್ಲಾ 'ಹೋಗಿ ಬಾ' ಎಂದೆನಲ್ಲಯ್ಯ.

ಬ್ರಾಹ್ಮಣ – ಅದೇ ನಾಯಕರೇ! ನೀವು, ಹೋಗಿ... 'ಬಾ' ಎಂದು ಹೇಳಿದ ರಿಂದೇ... ಮತ್ತೆ ಮತ್ತೆ ಬರುತ್ತಾ ಇರುವುದು.

ನಾಯಕ – ಕರ್ಮ, – ಕರ್ಮ. (ಎಂದು ತಲೆ ಬಡಿದುಕೊಳ್ಳುವನು.)

ಬ್ರಾ–ಮಗ – ಹೌದು! ಹೌದು!!

(ನಾಯಕರು ಹುಡುಗನನ್ನು ಸ್ವಲ್ಪಕೋಪದಿಂದ ದಿಟ್ಟಿಸಿ ನೋಡುವರು)

ಬ್ರಾಹ್ಮಣ – ಆ. . ಆ ದುಷ್ಕರ್ಮ ಪರಿಹಾರವಾಗಬೇಕಾದರೆ, ಇಂಥಾ ಸತ್ಕರ್ಮಗಳಿಗೆ ಸಹಾಯ ಮಾಡಬೇಕು. ನಾನು ಎಷ್ಟೋಸಲ ಹೇಳಿರುವೆನಲ್ಲ, ನನ್ನ ಮಗನ ಉಪನಯನ ಮಾಡಬೇಕೆಂದು. ಪಾಪ...., ನನ್ನ ಮುದ್ದಿನಮಗ (ನಾಯಕರು ಮತ್ತೊಂದು ಕಡೆ ನೋಡುತ್ತಿರುವಾಗ ನಾಯಕರನ್ನು ನೋಡಿಸುತ್ತಾ) ಇನ್ನೂ ಜ್ಞಾನಕಾರ್ಯಕ್ಕೆ ಅನರ್ಹನಾಗಿ ತತ್ತರಿಸುತ್ತಿರುವನು. ಇವನಿಗೆ ಈ ಅಜ್ಞಾನಾತ್ಮಕವಾದ ಮೊದಲನೇ ಜನ್ಮವನ್ನು ಬಿಡಿಸಿ, ಉತ್ತಮವಾದ ಎರಡನೇ ಜನ್ಮವನ್ನು ಕೊಡಬೇಕಾಗಿದೆ. ಆದಕ್ಕಾಗಿಯೇ ಈ ನನ್ನ ಪ್ರಯತ್ನ.

ನಾಯಕ – ಅಲ್ಲಯ್ಯಾ ಬ್ರಾಹ್ಮಣಾ, ನೀನು ಹೇಳುತ್ತಾ ಇರುವುದು ನೋಡಿದರೆ, ನಿನ್ನ ಮಗನಿಗೆ ಉಪನಯನ ಮಾಡುವಂತಿಲ್ಲ, ನನಗೇ ಬ್ರಹ್ಮೋಪದೇಶ ಮಾಡುವಂತಿದೆ. (ಕೋಪ ಬೇಸರಿಕೆಗಳಿಂದ) ಈ ಪುರಾಣವನ್ನೆಲ್ಲಾ ನನಗೇತಕ್ಕಯ್ಯಾ ಹೇಳುತ್ತಿ ಇದ್ದಿ? ಬೇರೆ ಎಲ್ಲಿಯಾದರೂ ಹೇಳು.

ಬ್ರಾಹ್ಮಣ – ನಾಯಕರೇ, ನನ್ನ ವರಿಗಲ್ಲದೇ...

ಬ್ರಾ–ಮಗ – ಮತ್ಯಾರಿಗೂ ಹೇಳುವವರಲ್ಲ.

ನಾಯಕ – ತಂದೆ ಮಗ ಒಳ್ಳೇ ಜೋಡಿ. ಅಲ್ಲ, ಈ ಊರನಲ್ಲಿ ನಾನೊಬ್ಬನೇ ದಾನಮಾಡಲು ಕಂಕಣಧಾರಿಯಾಗಿದ್ದೇನೆಯೇ? ಬೇರೆ ಕಡೆ ಪ್ರಯತ್ನ ಮಾಡಿದ್ದರೆ, ಇಷ್ಟು ಹೊತ್ತಿಗೆ ನಿನ್ನ ಮಗನ ಉಪನಯನವೇ ಆಗಿ ಹೋಗುತ್ತಿತ್ತು.

ಬ್ರಾಹ್ಮಣ – ಇಲ್ಲ ನಾಯಕರೇ, ನಾನು ಎಲ್ಲರನ್ನೂ ಯಾಚಿಸುವವನಲ್ಲ. ನನ್ನವರನ್ನೇ ಬೇಡುತ್ತೇನೆ.

ನಾಯಕ – ಓಹೋ!! ಇದು ಬೇರೆ ನಾಟಕ. ಅಂತೂ ನೀನು ಕೈ ಬಿಡುವವನಲ್ಲ ಅನ್ನು

ಬ್ರಾಹ್ಮಣ – ಎಂದಿಗೂ ಕೈಬಿಡಲಾರೆ. ನೆನೆದ ಕಾರ್ಯವನ್ನು ಸಾಧಿಸದೆಯೂ ಬಿಡಲಾರೆ. ನಾಯಕರೆ, ಬೇಡುವುದು ನನಗೆ ಹೊಸದಲ್ಲ. ನನ್ನವರಿಗಾಗಿ ಎಷ್ಟೋಮಂದಿಯ ಮುಂದೆ ಕೈಚಾಚಿದ್ದೇನೆ. ಆದರೆ ಈ ಕಾರ್ಯಕ್ಕಾಗಿ ಮೊದಲು ಯಾಚಿಸಿದ್ದು ನಿಮ್ಮನ್ನು. ಪ್ರಾರಂಭದಲ್ಲೇ ವಿಘ್ನವಾಗಬಾರದು. ಅದಕ್ಕಾಗಿ ಪತ್ರವನ್ನೋ, ಪುಷ್ಪವನ್ನೋ, ಫಲವನ್ನೋ ನಿಮ್ಮಿಂದ ತೃಪ್ತಿಯಿಂದ ಹೊಂದಬೇಕೆಂಬುದೇ ನನ್ನ ಸಂಕಲ್ಪ. ನೀವು ಏನಾದರೂ ಕೊಡಬೇಕು, ಅದರಿಂದ ನಾನು ತೃಪ್ತನಾಗಬೇಕು.

ನಾಯಕ – ನಾನು ಏನಾದರೂ ಕೊಡಬೇಕು, ಅಷ್ಟೇ ಅಲ್ಲ! (ಬ್ರಾಹ್ಮಣ ತಲೆಯಾಡಿಸುವನು.) ನಾನು ಅಭಿಮಾನದಿಂದ ಏನುಕೊಟ್ಟರೂ ತೆಗೆದುಕೊಂಡು ಪ್ರತ್ಯುತ್ತರ ಕೊಡದೆ ಹೊರಟುಹೋಗುತ್ತೀಯಲ್ಲ?

ಬ್ರಾಹ್ಮಣ – ಓಹೋ, ತಪ್ಪದು. ನೀವಂದಿರಲ್ಲ, ಅಭಿಮಾನದಿಂದ ಎಂತ, ಅದೊಂದಿದ್ದರೆ ಸಾಕು. ನಾಯಕರೇ, ಈ ಕೈ...

ಬ್ರಾ-ಮಗ – ಸಾಮಾನ್ಯವಾದುದಲ್ಲ!

ನಾಯಕ – ಹೌದು, ಹೌದು. ಕಾಣುತ್ತಲೇ ಇದೆಯಲ್ಲ.

(ಎಂದು ಹೇಳಿ, ಒಳಗೆ ಹೋಗಿ, ಒಂದು ಕಿಲುಬು ಹಿಡಿದ ಸವಕಲು ಕಾಸನ್ನು ತಂದು,)

ನಾಯಕ – ಇದೋ ಹಿಡಿ.

ಬ್ರಾಹ್ಮಣ – ನಾಯಕರೇ, ಒಮ್ಮೆ, ಮನಃಪೂರ್ವಕವಾಗಿ, ಕೃಷ್ಣಾರ್ಪಣವೆಂದು...

ನಾಯಕ – ಸರಿ, ಸರಿ. ಕೃಷ್ಣಾರ್ಪಣಮಸ್ತು.

(ಎಂದು ಹೇಳಿ ನಾಯಕರು ಬ್ರಾಹ್ಮಣನ ಕೈಯಲ್ಲಿ ನಾಣ್ಯವನ್ನು ಹಾಕುವರು. ಬ್ರಾಹ್ಮಣನು ನಾಯಕರು ಕೊಟ್ಟ ನಾಣ್ಯವನ್ನು ಚೆನ್ನಾಗಿ ಪರೀಕ್ಷೆ ಮಾಡಿ ಬಟ್ಟೆಯಿಂದ ಒರಸುವನು.)

ನಾಯಕ – ಏನಯ್ಯಾ ಅದು? ಪುಣ್ಯಕ್ಕೆ ಬಂದದ್ದನ್ನು ಹಿಡಿದು ಹಿಡಿದು ನೋಡುವುದೇ? ಅದು ದಾನವಾಗಿ ಕೊಟ್ಟದ್ದು.

ಬ್ರಾಹ್ಮಣ – ನಾಯಕರೇ, ನನ್ನ ಕೈಗೆ ಬಂದ ವಸ್ತುವಿನ ಮಾಲಿನ್ಯ ಕಳೆಯುವುದು ನನ್ನ ಕರ್ತವ್ಯವಷ್ಟೇ? ಇದಕ್ಕೆ ಚೆನ್ನಾಗಿ ಕಿಲುಬು ಹಿಡಿದಿದೆ. ತೆಗೆಯುತ್ತಾ ಇದ್ದೇನೆ.

ನಾಯಕ – ಸರಿ, ಸರಿ. ನನಗೆ ತುಂಬಾ ಕೆಲಸವಿದೆ. ಆ ಕೆಲಸವನ್ನು ಹೊರಗಡೆ ಹೋಗಿ ಮಾಡಿಕೋ.

ಬ್ರಾಹ್ಮಣ – ಹಾಗೆಯೇ ಆಗಲಿ. ನಿಮಗೆ ಮಂಗಳವಾಗಲಿ. ಹೋಗಿಬರುತ್ತೇವೆ ನಾಯಕರೆ.

ನಾಯಕ – ಮತ್ತೆ ಬರುತ್ತೀರಾ!

ಬ್ರಾ–ಮಗ – ನಮ್ಮಪ್ಪನ ಚಿತ್ತ.
(ಬ್ರಾಹ್ಮಣನು ಮಗನೊಡನೆ ಹೊರಟುಹೋಗುವನು. ಇಷ್ಟರಲ್ಲಿ ಸರಸ್ವತೀಬಾಯಿಯವರು ನೀರು ತೆಗೆದುಕೊಂಡು ಪ್ರವೇಶಿಸುವರು)

ನಾಯಕ – ಅಬ್ಬ, ಏನೇ ಆಗಲಿ, ಜಿಡ್ಡಿನಂಥಾಬ್ರಾಹ್ಮಣ ಸದ್ಯ ಕೈಬಿಟ್ಟನಲ್ಲ ಸಾಕು.

ಸರಸ್ವತಿ – ಯಾರು ಸ್ವಾಮಿ ಅವರು?

ನಾಯಕ – ಅದೇ ಹೇಳಿದೆನಲ್ಲ–ನೀನಲ್ಲದೆ ನನ್ನೆದುರು ನಿಂತು ಧರ್ಮೋಪದೇಶ ಮಾಡಿದ ಬ್ರಾಹ್ಮಣೋತ್ತಮ ನಿದ್ದಾನೇ ಅಂತ, ಆತನೆ. ಗುಡಿ ಗೋಪುರಗಳು ಕಟ್ಟಿಸಬೇಕಂತೆ, ಕೆರೆ ಬಾವಿಗಳು ತೋಡಿಸ ಬೇಕಂತೆ, ಛತ್ರಗಳಂತೆ, ಸಂತರ್ಪಣೆಗಳಂತೆ, ಸತ್ಕಾರ್ಯಗಳಂತೆ! ಒಂದೇ ಎರಡೇ; ಆ ಉಪದೇಶಕ್ಕೆ ಕೊನೆಯೋ ಮೊದಲೇ!

ಸರಸ್ವತಿ – ಆ, ಅವರೇ! ಇಲ್ಲಿಗೆ ಬಂದಿದ್ದರೆ! ನಾನು ನೋಡದೇ ಹೋದೆನಲ್ಲ!

ನಾಯಕ – ಎಲ್ಲಾ ನಾನು ನೋಡಿ, ಮಾಡಿ, ದುಡ್ಡು ಕೊಟ್ಟು ಕಳಿಸಿದ್ದಾಯಿತು. ನೀನೇನೂ ಮಾಡಬೇಕಾಗಿಲ್ಲ.

ಸರಸ್ವತಿ – ನೀವು! ದುಡ್ಡು ಕೊಟ್ಟಿರಾ!! ಬಹಳ ಸಂತೋಷ ಸ್ವಾಮಿ. ಇಂದಿಗೆ ನನ್ನ ಸೇವೆ ಫಲಿಸಿತು. ನಿಮ್ಮ ಕೈಯಿಂದ ಶ್ರೀಹರಿ ದಾನ ಮಾಡಿಸಿದನಲ್ಲ. ಅದೇ ಸಾಕು. ಇನ್ನು ಮುಂದೆ...

ನಾಯಕ – ಪ್ರಾರಂಭವಾಯಿತೇ ಉಪದೇಶ. ಸಾಕು. ಅದೇಕೋ ಈದಿನ ನಿನ್ನ ಮಾತುಗಳು ವಿಚಿತ್ರವಾಗಿವೆ. ಈ ದಾನ ಧರ್ಮಗಳ ಹುಚ್ಚನ್ನು ಸ್ವಲ್ಪ ತಗ್ಗಿಸು. ಇಲ್ಲದೇ ಇದ್ದಲ್ಲಿ, ಅನರ್ಥಗಳಾಗ ಬಹುದು. ನಾನು ಅಂಗಡಿಗೆ ಹೋಗುತ್ತೇನೆ; ಬಾಗಿಲು ಜಾಗ್ರತೆ. ಈ ಮಧ್ಯೇ ಕಳ್ಳತನಗಳು ಹೆಚ್ಚಾಗಿವೆಯಂತೆ.

ಸರಸ್ವತಿ – ಹಾಗೇ ಆಗಲಿ; ಹೋಗಿ ಬನ್ನಿ.
(ನಾಯಕರು ಹೊರಟು ಹೋಗುವರು.)

ಸರಸ್ವತಿ – ಶ್ರೀಹರೀ, ಈ ಜ್ಞಾನವನ್ನೇ ನನ್ನ ಸ್ವಾಮಿಗೆ ನಿರಂತರವಾಗಿ ಕರುಣಿಸು. ಅವರ ಲೋಭಿತನವನ್ನು ಕಳೆ. ನೀನಲ್ಲದೆ

ಉದ್ಧರಿಸುವವರು ಯಾರು? ಪರಮ ಪಾಪಿಗಳೆಂದು ಪ್ರಥಿತರಾದ ಅಜಾಮಿಳ ಮೊದಲಾದವರನ್ನು ಉದ್ಧರಿಸಿದ ಕರುಣಾಮಯಿ ನೀನು. ನನ್ನ ಸ್ವಾಮಿಯ ಪರವಾಗಿ ನಾನು ಪ್ರಾರ್ಥಿಸುತ್ತೇನೆ ಅವರ ಮನಸ್ಸನ್ನು ನಿರ್ಮಲಗೊಳಿಸು ದೇವಾ.

(ಇಷ್ಟರಲ್ಲಿ ಬ್ರಾಹ್ಮಣ ವೇಷಧಾರಿ ಶ್ರೀಹರಿ ಮಗನೊಡನೆ ಪುನಃ ಪ್ರವೇಶಿಸುವನು)

ಬ್ರಾಹ್ಮಣ – ಶೀಘ್ರಮೇವ ವಾಂಛಿತಫಲಸಿದ್ಧಿರಸ್ತು.

(ಸರಸ್ವತೀಬಾಯಿಯವರು ತಿರುಗಿನೋಡಿ, ಸೆರಗು ಸರಿಮಾಡಿ ಕೊಂಡು ಬಂದು, ನಮಸ್ಕರಿಸುವರು.)

ಬ್ರಾಹ್ಮಣ – ದೀರ್ಘಸುಮಂಗಲೀ ಭವ.

(ಸರಸ್ವತೀಬಾಯಿಯವರು ಅಲ್ಲಿ ಇರುವ ಎರಡು ಮಣೆಗಳನ್ನು ಹಾಕಿ)

ಸರಸ್ವತಿ – ಬನ್ನಿ, ಕುಳಿತುಕೊಳ್ಳಿ.

ಬ್ರಾಹ್ಮಣ – ಆಗಲಿ ತಾಯಿ... ಅಮ್ಮಾ, ನನ್ನ ಮಗನ ಉಪನಯನ; ಇದಕ್ಕೆ ನಿನ್ನ ಸಹಾಯ ಅತ್ಯಾವಶ್ಯಕ.

ಸರಸ್ವತಿ – ಆ!... ನೀವಾ!... ಸ್ವಾಮಿ, ನಾಯಕರು ನಿಮಗೆ ಸಹಾಯ...

ಬ್ರಾಹ್ಮಣ – ಆ... ಆ... ಸಹಾಯ ಮಾಡಿದರಮ್ಮ!

ಬ್ರಾ–ಮಗ – ಆರು ತಿಂಗಳು ತಿರುಗಿ ಉಪದೇಶ ಮಾಡಿದ್ದಕ್ಕೆ ಒಂದು ಕಿಲುಬು ಹಿಡಿದ ನಾಣ್ಯ!

(ಸರಸ್ವತೀಬಾಯಿಯವರು ವೇದನೆಯಿಂದ ತಲೆ ತಗ್ಗಿಸುವರು.)

ಬ್ರಾಹ್ಮಣ – ಅಮ್ಮ, ವ್ಯಥೆ ಪಡಬೇಡ; ಆತನಿಂದ ಏನಾದರೂ ತೆಗೆದುಕೊಳ್ಳ ಬೇಕೆಂಬ ಸಂಕಲ್ಪ ನನ್ನಲ್ಲಿತ್ತು; ತೆಗೆದುಕೊಂಡೆ ಅಷ್ಟೆ; ನೀನು ನಾಯಕರ ಸಹಧರ್ಮಚಾರಿಣಿ. ನಿನ್ನ ಅರ್ಪಣೆಯಿಂದಲೇ ಕಾರ್ಯ ಪೂರ್ಣವಾಗಬೇಕು.

ಸರಸ್ವತಿ – ಸ್ವಾಮಿ, ನಿಮ್ಮನ್ನು ನೋಡುತ್ತಿದ್ದರೆ ಏನೋ ಒಂದುವಿಧದ ಆನಂದವಾಗುತ್ತಾ ಇದೆ. ನಿಜವಾಗಿಯೂ ನಮ್ಮ ಪಾಲಿನ ದೈವವೇ ಮನೆಗೆ ಬಂದಂತಿದೆ. ಅಸ್ವತಂತ್ರಳಾದ ನನಗೆ ನೀವೇ ದಾರಿತೋರಿ ಜನ್ಮವನ್ನು ಸಾರ್ಥಕಗೊಳಿಸಿರಿ.

ಬ್ರಾಹ್ಮಣ – ನಿಜ ತಾಯಿ. ಹಾಗಾದರೆ–ಮುಕ್ತಿಗೆ ಮೌಲ್ಯವಾಗಬಲ್ಲ ಆ ನಿನ್ನ ಮುತ್ತಿನ ಮೂಗುತಿಯನ್ನು ನನಗೆ ಧಾರೆಯೆರೆ.

ಸರಸ್ವತಿ – (ಪ್ರತ್ಯುತ್ತರ ಕೊಡದೆ ಆಜ್ಞಾಬದ್ಧಳಾದಂತೆ) ಅಜ್ಞೆ...

(ಎಂದು ಹೇಳಿ ಮೂಗುತಿಯನ್ನು ಮೂಗಿನಿಂದ ತೆಗೆದು, ಬ್ರಾಹ್ಮಣನಿಗೆ ದಾನವಾಗಿ ಕೊಡುತ್ತಾ ಭಗವಂತನನ್ನು ಪ್ರಾರ್ಥಿಸುವಳು.)

ಭವಹರ, ಎಲ್ಲಾ ನಿನ್ನ ಲೀಲೆ. ಈ ಕ್ಷಣದಲ್ಲಿ ಈ ಬುದ್ಧಿ ಕೊಟ್ಟು ದಾನಮಾಡಿಸುತ್ತಿರುವವನು ನೀನೇ. ನಿನ್ನ ಪಾದಕ್ಕೆ ಸರ್ವವೂ ಅರ್ಪಿತವು. ಶ್ರೀ ಕೃಷ್ಣಾರ್ಪಣಮಸ್ತು.

(ಎಂದು ಹೇಳಿ ಬ್ರಾಹ್ಮಣನ ಕೈಯಲ್ಲಿ ಮೂಗುತಿಯನ್ನು ಹಾಕಿ ನಮಸ್ಕರಿಸುವಳು.)

ಬ್ರಾಹ್ಮಣ – ಸಂಪ್ರೀತನಾದೆನಮ್ಮ. ಶುಭಮಸ್ತು. ನಿನ್ನ ಮನೋಭೀಷ್ಟ ಈಡೇರುವುದು. ಅರ್ಥವತ್ತಾಗಿ ಕೊಟ್ಟ ಈ ದಾನ ಎಂದಿಗೂ ವ್ಯರ್ಥವಾಗಲಾರದು.

ಸರಸ್ವತಿ – ಎಲ್ಲಾ ನಿಮ್ಮ ದಯೆ.

(ಬ್ರಾಹ್ಮಣ ಸ್ವಲ್ಪ ಮುಂದೆಹೋಗಿ ಪುನಃ ಬಂದು)

ಬ್ರಾಹ್ಮಣ – ಅಮ್ಮಾ...

ಸರಸ್ವತಿ – ಏನು ಸ್ವಾಮಿ ?

ಬ್ರಾಹ್ಮಣ – ಅಮ್ಮಾ, ನನ್ನಲ್ಲಿ ತಂಬೂರಿ ಚಿಟಿಗೆ ಗೋಪಾಳ ಬುಟ್ಟಿಗಳಿವೆ. ನಾನು ಒಂದು ಕಡೆ ಇರುವವನಲ್ಲ. ಎಲ್ಲಾಕಡೆಗೂ ತಿರುಗುತ್ತಾ, ಎಲ್ಲರೊಡನೆ ಸಂಬಂಧವನ್ನಿಟ್ಟುಕೊಂಡ ವಿಶ್ವಕುಟುಂಬಿ ನಾನು. ಇಂಥಾ ನನಗೆ ಅವು ಬಹು ಭಾರ. ನಿನ್ನಲ್ಲಿಟ್ಟುಕೊಂಡು ಜೋಕೆಯಿಂದ ಕಾಪಾಡುವೆಯಾ ?

ಬ್ರಾ–ಮಗ – ಈ ಸಹಾಯ ಮಾತ್ರ ಮಾಡಮ್ಮ. ಅವನ್ನು ಹೊತ್ತು ಹೊತ್ತು ಸಾಕಾಗಿದೆ; ತಿರುಗಲಾರೆ.

ಸರಸ್ವತಿ – ಅಯ್ಯೋ, ಅದಕ್ಕೇನಂತೆ. ತಂದುಕೊಡಿ ನಿಕ್ಷೇಪದಂತೆ ಅವನ್ನು ಇಟ್ಟುಕೊಳ್ಳುತ್ತೇನೆ.

ಬ್ರಾಹ್ಮಣ – ಸಂತೋಷ ತಾಯಿ. ಹಿರಣ್ಯಗರ್ಭ, ಆ ನಮ್ಮ ವಸ್ತುಗಳನು ತೆಗೆದುಕೊಂಡು ಬಾ.

ಬ್ರಾ–ಮಗ – ಆಜ್ಞೆ ತಂದೆ......

(ಮಗ ತಂಬೂರಿ ಮೊದಲಾದವುಗಳನ್ನು ತರಲು ಹೊರಗೆ ಹೋಗುವನು.)

ಸರಸ್ವತಿ – ಏನು, ಬೇರೆ ಎಲ್ಲಾದರೂ ಇಟ್ಟಿದ್ದೀರಾ ?

ಬ್ರಾಹ್ಮಣ – ಇಲ್ಲ–ಇಲ್ಲ–ಅವು ನಿರಂತರ ನಮ್ಮ ಹತ್ತಿರದಲ್ಲೇ ಇರುತ್ತವೆ. ಹೊರಗಡೆಯೇ ಇಟ್ಟಿದ್ದೇವೆ. ಅದೋ ತರುತ್ತಿದ್ದಾನಲ್ಲ.

(ಹಿರಣ್ಯಗರ್ಭನು ತಂದೆ ಹೇಳಿದಂತೆ ತಂಬೂರಿ–ಚಿಟಿಕೆ–ಗೋಪಾಳ ಬುಟ್ಟಿಗಳನ್ನು ತರುವನು. ಬ್ರಾಹ್ಮಣ ಅವುಗಳನ್ನು ಸರಸ್ವತಿಯ ಕೈಗೆ ಕೊಡುವನು. ಸರಸ್ವತಿ ಅವುಗಳನ್ನು ಕಣ್ಣಿಗೆ ಒತ್ತಿಕೊಳ್ಳುತ್ತಾ ಭಕ್ತಿಯಿಂದ ತೆಗೆದುಕೊಳ್ಳುವಳು.)

ಬ್ರಾಹ್ಮಣ – ತಾಯಿ, ಇವು ನನಗೆ ಅತ್ಯಂತ ಪ್ರಿಯವಾದುವುಗಳು. ಬಹಳ ಜೋಕೆಯಿಂದ ಕಾಪಾಡಮ್ಮಾ. ಅಮ್ಮಾ, ಬೇಕಾದರೆ ಇವನ್ನು ನೀವೇ ಬಳಸಿಕೊಳ್ಳಬಹುದು; ನನ್ನ ಅಭ್ಯಂತರವಿಲ್ಲ.

ಸರಸ್ವತಿ – ಆ ಸೌಭಾಗ್ಯ ನಮಗಿದೆಯೆ ? ಏನೇ ಆಗಲಿ, ನಿಮ್ಮ ಆಜ್ಞೆಯನ್ನು ಪಾಲಿಸುತ್ತೇನೆ.

ಬ್ರಾಹ್ಮಣ – ಒಳ್ಳೆಯದು. ನೀನು ಭಕ್ತಿಯಿಂದ ಕೊಟ್ಟ ಮೂಗುತಿಯಿಂದ ಇನ್ನು ಮುಂದಿನ ಕೆಲಸಗಳು ನಡೆಯಬೇಕು. ನಾವು ಹೋಗಿ ಬರುತ್ತೇವೆ, ಶುಭಮಸ್ತು.

(ಸರಸ್ವತೀಬಾಯಿಯವರು ನಮಸ್ಕರಿಸುವರು.)

(ಬ್ರಾಹ್ಮಣ ಮಗನೊಡನೆ ನಿಷ್ಕ್ರಮಿಸುವನು.)

ಪ್ರಥಮಾಂಕವು ಸಮಾಪ್ತವಾಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥

———

# ಎರಡನೇ ಅಂಕ

ತೆರೆ ಏಳುವುದು .

(ಶ್ರೀನಿವಾಸನಾಯಕರ ಮನೆ. ಶ್ರೀನಿವಾಸನಾಯಕರು ಕೋಪ ದಿಂದ ಒಳಗೆ ಪ್ರವೇಶಿಸಿ, ನಡುಮನೆಯಲ್ಲಿ ಆಕಡೆ ಈಕಡೆ ಎರಡು ಸಲ ನಡೆದಾಡಿ, ಕಿಸೆಯಿಂದ ಒಂದು ಸಣ್ಣ ಡಬ್ಬಿಯನ್ನು ತೆಗೆದು, ಅದರಲ್ಲಿರುವ ಮೂಗುತಿಯನ್ನು ನೋಡುತ್ತಾ–)

ಯಕ – ಅನುಮಾನವಿಲ್ಲ, ನಿಸ್ಸಂದೇಹವಾಗಿ ಇದು ಸರಸ್ವತಿಯ ಮೂಗುತಿಯೇ; ಇಂಥಾ ಮೂಗುತಿ ಈ ಪ್ರಾಂತದಲ್ಲಿ ಎಲ್ಲೂ ಇಲ್ಲ. ಹಾಗಾದರೆ ಇದು ಆ ಬ್ರಾಹ್ಮಣನ ಕೈಗೆ ಹೇಗೆ ಸೇರಿತು? ಉಂ ... ಬ್ರಾಹ್ಮಣ ಇಷ್ಟು ಮೋಸಗಾರನೆಂದು ಸ್ವಪ್ನದಲ್ಲೂ ಊಹಿಸಿರಲಿಲ್ಲ. ಎಲ್ಲಾ ವೇಷ; ಏನು ಆ ಮಾತು! ಏನು ಆ ಮುಖಕಳೆ! ಏನಾ ಗಾಂಭೀರ್ಯ! ಉಪನಯನವಂತೆ ಅದಕ್ಕೆ ನನ್ನ ಸಹಾಯ ಅತ್ಯಾವಶ್ಯಕವಂತೆ! ನನ್ನನ್ನು ಉದ್ಧರಿಸಲಿಕ್ಕಾಗಿಯೇ ಬಂದಿರುವನಂತೆ! ತನ್ನವರನ್ನಲ್ಲದೆ ಮತ್ಯಾರನ್ನೂ ಯಾಚಿಸುವವನಲ್ಲವಂತೆ! ಕಳ್ಳ! ಮಹಾಕಳ್ಳ! ದಾನಬೇಡಲು ಬಂದನಂತೆ ದಾನಬೇಡಲು! ನನ್ನಲ್ಲಿ ಆಟಸಾಗದ ಬ್ರಾಹ್ಮಣ, ಮನೆಯಲ್ಲಿ ದೂರಿ, ಸರಸ್ವತಿಯ ಮೂಗುತಿಯನ್ನು ಕದ್ದಿದ್ದಾನೆ. ಏ ಬ್ರಾಹ್ಮಣಬ್ರುವ! ಎಲ್ಲಿಗೆ ಹೋಗುತ್ತೀಯೋ ನೋಡುತ್ತೇನೆ. ನನ್ನ ಮನೆಯಲ್ಲಿ ಕದ್ದ ಮೂಗುತಿಯನ್ನು ನನಗೇ ಮಾರಲು ಬಂದೆಯಾ! (ಆಲೋಚನೆ ಮಾಡುತ್ತಾ) ಛೇ, ನನ್ನ ಊಹೆ ಸರಿಯಲ್ಲ. ಎಂಥಾ ಹುಚ್ಚನಾದರೂ ತಾನು ಕದ್ದ ವಸ್ತುವನ್ನು ಪುನಃ ಆ ವಸ್ತುವಿನ ಯಜಮಾನನಿಗೇ ಮಾರಲು ಎಂದಿಗೂ ಬರಲಾರನು: ಇದು ಸತ್ಯ; ಹಾಗಾದರೆ ? ಆ ಬ್ರಾಹ್ಮಣನ ಸವಿನುಡಿಗೆ, ಆಕಾರಕ್ಕೆ, ಮಾರುಹೋಗಿ ಪರಮಾತ್ಮನೆಂದೇ ಭಾವಿಸಿ, ಸರಸ್ವತಿಯೇ ದಾನವಾಗಿ ಕೊಟ್ಟಿರಬಹುದು! ಉಂ ಸಂದೇಹ ವಿಲ್ಲ. ಇದು ಸರಸ್ವತಿಯ ವ್ಯವಹಾರವೇ. ಸರಸ್ವತೀ, ಕೊನೆಗೆ ನಿನ್ನ ದಾನಧರ್ಮದ ಬುದ್ಧಿ ಇಷ್ಟರವರಿಗೆ ಬಂತೇ! ಆಗಲಿ, ಇದರ ಪರಿಣಾಮ ಹೇಗಿರುತ್ತದೆಯೋ ನೋಡುವೆಯಂತೆ! (ಕೋಪದಿಂದ ಸರಸ್ವತಿಯನ್ನು ಗಟ್ಟಿಯಾಗಿ ಕೂಗುವರು.)
ಸರಸ್ವತೀ,......ಸರಸ್ವತೀ,......ಸರಸ್ವತೀ......
(ಸರಸ್ವತಿ ಬಾಯಿಯು ಭಯಪಡುತ್ತಾ ಪ್ರವೇಶಿಸಿ, ನಾಯಕರಿಗೆ ಮುಖವನ್ನು ತೋರದೇ, ತಲೆತಗ್ಗಿಸಿ ಕೊಂಡು ನಿಂತು)

ಸರಸ್ವತಿ – ಕರೆದಿರಾ?

(ನಾಯಕರು ಸರಸ್ವತಿ ಬಾಯಿಯ ಮುಖವನ್ನೇ ದಿಟ್ಟಿಸಿನೋಡು ವರು. ಏನೂ ಮಾತಾಡುವುದಿಲ್ಲ. ಈ ಮೌನವನ್ನು ಭರಿಸ ಲಾರದೆ, ಭಯದಿಂದ ಅಲ್ಲಿಂದ ಹೇಗಾದರೂ ಹೊರಡಬೇಕೆಂದು ಸರಸ್ವತೀ ಬಾಯಿಯು.) ಕಾಲಿಗೆ ನೀರು ತರುತ್ತೇನೆ.

ನಾಯಕ – ನಿಲ್ಲು...ನೀರು ಬೇಕಾಗಿಲ್ಲ (ಧ್ವನಿಯನ್ನು ಬದಲಾಯಿಸುತ್ತಾ ವ್ಯಂಗವಾಗಿ) ಸರಸ್ವತೀ, ಎಲ್ಲಿ ಇತ್ತ ತಿರುಗು. ನನ್ನ ಕಡೆ ನೋಡು. ಏನು ನಿನ್ನ ಮುಖ ನೋಡಬಾರದೇ?

(ಸರಸ್ವತಿಬಾಯಿಯು ಭಯದಿಂದ ಮೆಲ್ಲಗೆ ತಿರುಗಿ ನಾಯಕರ ಮುಖವನ್ನು ನೋಡುತ್ತಾರೆ)

ಓಹೋ...! ಈದಿನ ವ್ರತವೆಂದು ಎರೆದು ಕೊಂಡಿದ್ದೀಯಲ್ಲ. ಅಲ್ಲಾ ಸರಸ್ವತೀ, ಯಾವಾಗಲೂ ಎರೆದುಕೊಳ್ಳುವಾಗ ಎಣ್ಣೆ ಯಾಗುತ್ತದೆ ಎಂದು, ಬೆಂಡೋಲೆ, ಮೂಗುತಿ ಎರಡನ್ನೂ ತೆಗೆದಿಡುತ್ತಿದ್ದೆ? ಈ ದಿನ ಏನು ಮೂಗುತಿಯನ್ನು ಮಾತ್ರ ತೆಗೆ ದಿಟ್ಟೆಯಲ್ಲಾ? ಓಹೋ! ಅವಸರದಲ್ಲಿ ಮರೆತಂತಿದೆ ಅಲ್ಲವೇ? ಎಲ್ಲಿ ಸ್ವಲ್ಪ ಆ ನಿನ್ನ ಮೂಗುತಿಯನ್ನು ತೆಗೆದುಕೊಂಡು ಬರುತ್ತೀಯಾ?

ಸರಸ್ವತಿ – (ಭಯಪಡುತ್ತಾ ಸ್ವಲ್ಪ ಮುಂದೆ ಬಂದು) (ಸ್ವಗತ) ಶ್ರೀಹರೀ ಏನೀ ಪರೀಕ್ಷೆ! (ಗಟ್ಟಿಯಾಗಿ) ಸ್ವಾಮಿ!

ನಾಯಕ – ಏನು?

ಸರಸ್ವತಿ – (ಮಾತು ಮರೆಸುವ ಪ್ರಯತ್ನದಿಂದ) ಅಲ್ಲ, ಇವತ್ತೇನು ಅಂಗಡಿಯಿಂದ ಬೇಗನೇ ಬಂದುಬಿಟ್ಟಿರಲ್ಲ! ದೇವರ ದಯದಿಂದ ಅಡಿಗೆಯೂ ಆಗಿದೆ. ಏಳಿ; ಮಡಿಯುಟ್ಟುಕೊಳ್ಳಿ; ಊಟ ಮಾಡಿ...

ನಾಯಕ – (ತೀಕ್ಷ್ಣವಾಗಿ ನೋಡುತ್ತಾ) ಸರಸ್ವತೀ, ನಿನ್ನ ಎದುರಿನಲ್ಲಿ ನಿಂತವನು ನುರಿತ ವ್ಯಾಪಾರಿ ಶ್ರೀನಿವಾಸನಾಯಕ. ಮಾತು ಮರೆಸಲು ಪ್ರಯತ್ನಿಸಬೇಡ. ಮೊದಲು ಮೂಗಿತಿಯನ್ನು ತೆಗೆದುಕೊಂಡುಬಾ.

ಸರಸ್ವತಿ – (ಅಂಜುತ್ತಾ) ಅದು... ಅದು... ದೇವರ ಹತ್ತಿರ ಇದೆಯಲ್ಲಾ.

ನಾಯಕ – ನೀನು ಯಾವಾಗಲೂ ಮಡಿಯಲ್ಲೇ ಇರುತ್ತೀಯಲ್ಲ, ಮತ್ತೇನು?

ಸರಸ್ವತಿ – ಏಕೆ ಈ ದಿನ ಇಷ್ಟು ಕೋಪದಲ್ಲಿದ್ದೀರಿ ?

ನಾಯಕ – ಸರಸ್ವತೀ, ನನ್ನ ಮನಸ್ಸನ್ನು ನೀಬಲ್ಲೆ. ಧನಕ್ಕಿಂತಲೂ ಶ್ರೇಷ್ಠವಾದುದು ಈ ಪ್ರಪಂಚದಲ್ಲಿ ನನಗೆ ಯಾವುದೂ ಇಲ್ಲ. ಈ ವಿಷಯದಲ್ಲಿ ನನ್ನನ್ನು ಮೋಸಗೊಳಿಸಲು ಪ್ರಯತ್ನಿಸಬೇಡ. ಎಲ್ಲಿ ಆ ಮೂಗುತಿ ? ಈಗಲೇ, ಈಕ್ಷಣದಲ್ಲೇ ಅದು ನನ್ನ ಕೈಗೆ ಬರಬೇಕು.

(ಇಷ್ಟರಲ್ಲಿ ಹೊರಗಿನಿಂದ ಸಾಲದ ದುಡ್ಡು
ಕಟ್ಟಲು ಬಂದ ರಂಗಪ್ಪ ಕೂಗುವನು.)

(ಹಿನ್ನೆಲೆಯಿಂದ) ನಾಯಕರೇ,... ಶೀನಪ್ಪನಾಯಕರೇ !
ಯಾರೋ ಅದು? (ಹಿನ್ನೆಲೆಯಿಂದ) ನಾನ್ರೀಯಪ್ಪ ರಂಗಪ್ಪ !
ನಿಮ್ಮ ಸಾಲ ಕಟ್ಲಿಕ್ಕೆ ಬಂದೀನಿ.
ಬರ್ತೀನಿ ಬರ್ತೀನಿ ಕೂಡು. (ಎಂದು ಹೇಳಿ ಅಲ್ಲಿ ಇದ್ದಲೆಕ್ಕದ ಪುಸ್ತಕ ತೆಗೆದುಕೊಂಡು) ಸರಸ್ವತೀ, ನಾ ಬರುವುದರೊಳಗೆ ಮೂಗುತಿ ಇಲ್ಲಿರಬೇಕು.

ಸರಸ್ವತಿ – ಸ್ವಾಮಿ, ಕೋಪಮಾಡಿಕೊಳ್ಳಬೇಡಿ. ಶಾಂತ ಚಿತ್ತರಾಗಿ ನನ್ನ ಮಾತನ್ನು......

ನಾಯಕ – (ಕೋಪದಿಂದ) ಸರಸ್ವತೀ, ಈ ಉಪದೇಶವೆಲ್ಲಬೇಡ. ನನ್ನ ಮನಸ್ಸು ಈ ವಿಷಯದಲ್ಲಿ ಕಲ್ಲು. ನಿನಗೆ ನಾನು ಬೇಕಾದರೆ, ಮೂಗಿತಿ ನನ್ನಕೈಗೆ ಬರಬೇಕು. ಇಲ್ಲವಾದರೆ ಇಂದಿಗೆ ನನ್ನ ನಿನ್ನ ಋಣತೀರಿ ಹೋಯಿತು.

ಸರಸ್ವತಿ – (ಭಯದಿಂದ ಥಟ್ಟನೆ ಕಾಲಿಗೆ ಬೀಳುತ್ತಾ) ಸ್ವಾಮಿ, ನಿಮ್ಮ ಕಾಲು ಹಿಡಿದು ಕೊಳ್ಳುತ್ತೇನೆ. ಆ ಮಾತನ್ನು ಮಾತ್ರ ಅನ್ನಬೇಡಿ. ನಿಮ್ಮನ್ನು ಅಂಗಲಾಚಿ ಬೇಡಿಕೊಳ್ಳುತ್ತೇನೆ.

ನಾಯಕ – ಇಲ್ಲ, ಅದು ಅಷ್ಟೇ. (ಎಂದು ಕಾಲು ಬಿಡಿಸಿಕೊಂಡು ಸಿಟ್ಟಿನಿಂದ ಹೊರಟು ಹೋಗುವರು.)

ಸರಸ್ವತಿ – ಸ್ವಾಮಿ, ಕೃಷ್ಣ ! ಏನೀಪರೀಕ್ಷೆ! ಅವರ ಮನಸ್ಸು ಬಹಳ ಕಠಿಣ. ಎಂದೂ ಆಡದೇ ಇರುವ ಮಾತನಾಡಿರುವರು. ನಿನ್ನ ಪರೀಕ್ಷೆಗೆ ನಿಲ್ಲಲು ನಾನು ಶಕ್ತಳೇ ? ಮಗನ ಉಪನಯನವೆಂದು ಆ ಬ್ರಾಹ್ಮಣನು ಬಂದು ಯಾಚಿಸುವುದೇನು ! ಬ್ರಾಹ್ಮಣನ ಮುಖ ನೋಡಿದಾಕ್ಷಣ ಹಿಂದೂ ಮುಂದೂ ಆಲೋಚಿಸದೇ ಮೂಗುತಿ

ಯನ್ನು ದಾನ ಕೊಡುವುದೇನು! ಎಲ್ಲವೂ ಕ್ಷಣಾರ್ಧದಲ್ಲಿ ನಡೆದು
ಹೋಯಿತೆ! ಆ ಬ್ರಾಹ್ಮಣೋತ್ತಮನನ್ನು ನೆನೆದರೆ ಸಾಕು!
ಮೈ ಪುಳಕವಾಗುತ್ತದೆ! ಆಮಾತು, ಆತೇಜಸ್ಸು, ಆನೋಟ,
ಆನನುಭೂತವಾದದ್ದು! ಗೊಲ್ಲತಿಯರ ಮನೆಯಲ್ಲಿ ನಲಿದಾಡಿದ
ಆನಂದನಂದನನೇ ಬಂದು ಮಾತಾಡಿದಂತಿತ್ತು! ಶ್ರೀಹರೀ,
ಏನೂ ಅರಿಯದವಳು ನಾನು. ಈ ಸಂಕಷ್ಟದಿಂದ ನೀನೇ ಪಾರು
ಮಾಡಬೇಕು. ಈ ಸಮಯದಲ್ಲಿ ನೀನಲ್ಲದೆ ಕಾಯುವವರ ನಾ
ಕಾಣೆ.

ಅಸುರ ಭನ್ನಟ್ಟಿ ಬರೆ ಪಶುಪತಿಯ ರಕ್ಷಿಸಿದೆ
ಋಷಿಯ ಶಾಪವ ಪರಿದು ಅಂಬರೀಷನ ಕಾಯ್ದೆ
ವಸುಧೆಯಲಿ ಕಲ್ಲಾಗಿ ಬಿದ್ದ ಅಹಲ್ಯೆಯ ಪೊರೆದೆ
ಶಿಶು ಪ್ರಹ್ಲಾದಗೊಲಿದೆ ॥

ಹಸುಳೆ ಧ್ರುವರಾಯಂಗೆ ಪೆಸರುಳ್ಳಪದವನಿತ್ತೆ
ದಶಕಂಠನನುಜಂಗೆ ಸ್ಥಿರ ಪಟ್ಟವನು ಕೊಟ್ಟೆ
ಹೆಸರುಗೊಂಡರೆ ಮಗನ ಅಜಾಮಿಳನ ರಕ್ಷಿಸಿದೆ
ವಸುದೇವಸುತನೆ ಸಲಹೋ ॥

ಕೃಷ್ಣಾ, ಕಾಪಾಡಲಾರೆಯಾ? ಪಾಲಿಸು ತಂದೇ; ಪಾಲಿಸು.
ಈದೀನಳಲ್ಲಿ ನಿನ್ನ ಪರೀಕ್ಷೆಯೇ? ಅವರಮನೋವೃತ್ತಿ
ಯನ್ನು ತಿಳಿದೂ ಸಹಾ ನನ್ನನ್ನು ಪರೀಕ್ಷಿಸುವೆಯಾ?

(ಇಷ್ಟರಲ್ಲಿ ಹಿನ್ನೆಲೆಯಿಂದ ಶ್ರೀನಿವಾಸನಾಯಕರು ಆಂದಂತೆ
ಸರಸ್ವತೀ ಬಾಯಿಗೆ ಹಿಂದಿನ ಮಾತುಗಳು ಕೇಳಿಸುವುವು. ಇದು
ಭ್ರಾಂತಿ)

(ಹಿನ್ನೆಲೆಯಿಂದ) "ಸರಸ್ವತೀ, ನಿನಗೆ ನಾನು ಬೇಕಾದರೆ,
ಮೂಗುತಿ ನನ್ನ ಕೈಗೆ ಬರಬೇಕು. ಇಲ್ಲದೇ ಇದ್ದರೆ ಇಂದಿಗೆ
ನನ್ನ ನಿನ್ನ ಋಣ ತೀರಿತು, ಋಣತೀರಿತು, ಋಣತೀರಿತು."

(ರಂಗ ಮಂಟಪದಲ್ಲಿ ಸರಸ್ವತಿ ಬಾಯಿಯವರು
ಭಯದಿಂದ ಅತ್ತಿತ್ತ ತಿರುಗುತ್ತಾ ಕಿವಿಗಳನ್ನು ಮುಚ್ಚಿಕೊಂಡು.)

ಸರಸ್ವತಿ — ದೇವಾಧಿ ದೇವ! ಅನಾಥರಕ್ಷಕ! ಆಪದ್ಬಾಂಧವ!

ಲಕ್ಷ್ಮೀಮನೋಹರನೆ ಇಕ್ಷುಚಾಪನಪಿತನೆ
ಯಕ್ಷ ಗಂಧರ್ವ ಅಮರೇಂದ್ರ ಮುನಿ ವಂದಿತನೇ
ಅಕ್ಷಯನೇ ಆಟದಲಿ ಜಗವ ಮೋಹಿಪ ಸ್ಥೂಲ
ಸೂಕ್ಷ್ಮದೊಳು ಪರಿಪೂರ್ಣನೇ

ಕುಕ್ಷಿಯೊಳೀರೇಳು ಜಗವ ಪಾಲಿಸುತಿಹನೆ
ಅಕ್ಷಾಸುರಾಂತಕಗೆ ಅಜಪದವಿಯಿತ್ತವನೆ
ದಕ್ಷಸುತೆಪತಿಸಖನೆ ಪಕ್ಷಿವಾಹನ
ರಕ್ಷಿಸೋ ಅನಾಥಬಂಧೋ......

ತಂದೆ ತಾಯಿಯು ನೀನೆ, ಬಂಧು ಬಳಗವು ನೀನೆ
ಇಂದೆನ್ನ ಕುಲಸ್ವಾಮಿ ಗುರುಪಿತಾಮಹನು ನೀನೆ
ಎಂದು ನಂಬಿದೆ ಎನ್ನ ಮಾನಾಭಿಮಾನವ ಮು
ಕುಂದಾ ನಿನಗೊಪ್ಪಿಸಿದೆನೋ !

ಕೊಂದರೊಳಿತು ಕಾಯ್ದರೊಳಿತು
ದೇವಾ ರಕ್ಷಿಸೋ ... ರಕ್ಷಿಸೋ ... ರಕ್ಷಿಸೋ ... ...

(ಎಷ್ಟು ಪ್ರಾರ್ಥಿಸಿದರೂ ಭಗವಂತನು ಕರುಣಿಸುವುದಿಲ್ಲ)

ಸ್ವಾಮಿ, ಕರುಣಿಸಲಾರೆಯಾ! ಅಂಗಲಾಚಿಬೇಡಿದರೂ ಕಾಯ ಲಾರೆಯಾ! ಹುಂ ... ಹೌದು, ನೀನು ಬಂದು ಕಾಪಾಡು ವಷ್ಟು ಭಕ್ತಿ ನನ್ನಲ್ಲಿಲ್ಲದೆ! ಕರೆದರೂ ಬರಲಿಲ್ಲವೆಂಬ ಅಪಖ್ಯಾತಿ ನಿನಗೇಕೆ? ಅವರನ್ನು ಮೆಚ್ಚಿಸಿ, ಒಪ್ಪಿಸಲು ಅಸಮರ್ಥಳಾಗಿ ದ್ದೇನೆ. ನನ್ನ ಪ್ರಾರಬ್ಧ ಹೇಗಿದ್ದರೆ ಹಾಗಾಗಲಿ. ಇನ್ನು ನನಗೆ ದೇಹತ್ಯಾಗವೇ ಮಾರ್ಗ!

(ಎಂದು ಹೇಳಿ ಆತ್ಮಹತ್ಯೆಗೆ ಮಾರ್ಗಹುಡುಕುವಳು. ಇಷ್ಟರಲ್ಲಿ ಪುಸ್ತಕಗಳ ಪಕ್ಕದಲ್ಲಿ ಭಂಗಾರದ ಪರೀಕ್ಷೆಗೆ ಉಪಯೋಗಿಸುವ ದ್ರಾವಕದ ಸೀಸೆ ಕಾಣಿಸುವುದು. ಅದನ್ನು ತೆಗೆದುಕೊಂಡು,)

– ಕೃಷ್ಣಾ. ನನ್ನ ಸರ್ವಸ್ವವೂ ನಿನಗರ್ಪಿತವು! ನನ್ನ ಸ್ವಾಮಿಯ ಸೇವಾಭಾಗ್ಯವನ್ನು ಜನ್ಮ ಜನ್ಮದಲ್ಲೂ ಕರುಣಿಸು! ಅವರನ್ನು ಉದ್ಧರಿಸು! ದುಡ್ಡಿನ ವ್ಯಾಮೋಹವನ್ನು ಬಿಡಿಸಿ, ನಿನ್ನ ಪಾದ ದಾಸರನ್ನಾಗಿ ಮಾಡಿಕೋ! ನಾಥ, ಈ ಜನ್ಮಕ್ಕೆ ನಿಮ್ಮ ಸೇವಾಭಾಗ್ಯ ಇಷ್ಟೇ ಎಂದು ನನ್ನ ಹಣೆಯಲ್ಲಿ ಬರೆದಿದೆ! ನನ್ನನ್ನು ಕ್ಷಮಿಸಿರಿ! ನಮೋನಮಃ! ನಾರಾಯಣಾ! ನಾರಾ

ಯಣ! ನಾರಾಯಣ! (ಎಂದು ಹೇಳುತ್ತಾ, ಕಣ್ಣು ಮುಚ್ಚಿಕೊಂಡು ದ್ರಾವಕವನ್ನು ಕುಡಿಯಲು ಸನ್ನದ್ಧಳಾಗುವಳು. ಇಷ್ಟರಲ್ಲಿ ಅಶರೀರವಾಣಿಯಾಗುವುದು.

(ಹಿನ್ನೆಲೆ) ಸಾಧ್ವೀ, ತಡೆ. ಸುಪ್ರೀತನಾದೆ. ಇದೋ ನೀಕೊಟ್ಟ ಮೂಗುತಿ. ಮುಕ್ತಿಗೆ ಸೌಲಭ್ಯವಾದ ಮೂಗುತಿಯನ್ನು ಧಾರೆಯೆರೆದು ಮುಕ್ತಿದಾತನಾದ ನನ್ನನ್ನೇ ಕೊಂಡೆ. ಶುಭಮಸ್ತು.

( ಮೇಲಿಂದ ಮೂಗುತಿ ಸರಸ್ವತಿಯ ಮುಂದೆ ಬೀಳುವುದು. ಆನಂದದಿಂದ ಮೂಗುತಿಯನ್ನು ಕೈಗೆ ತೆಗೆದುಕೊಂಡು, ಕಣ್ಣಿಗೆ ಹಚ್ಚಿ ಕೊಳುತ್ತಾ )

ಕೃಷ್ಣಾ, ತಂದೆ ! ಏನು ಕರುಣೆಯೋ ನೀನು ! ನಿನ್ನ ಭಕ್ತ ವಾತ್ಸಲ್ಯಕ್ಕೆ ಎಣೆಯೇ ಕಾಣದಲ್ಲ ! ನಮ್ಮ ಮನೆದೈವವೇ! ಅಲ್ಪರಾದ ನಮ್ಮನ್ನು ಉದ್ಧರಿಸಿದೆಯಾ! ಕೃಷ್ಣಾ! ತಂದೆ! ಜಗನ್ನಾಥ! ದೇವ ದೇವ! ಪುಂಡರೀಕವರದಾ! ಪಾಂಡುರಂಗಾ! ಕೃಷ್ಣಾ!! ಕೃಷ್ಣಾ ! ಕೃಷ್ಣಾ ! ಕೃಷ್ಣಾ !!!

( ಇಷ್ಟರಲ್ಲಿ ನಾಯಕರು ಪ್ರವೇಶಿಸುವರು. ಸರಸ್ವತೀಬಾಯಿಯವರು ಆನಂದದಿಂದ ಕಾಲಿಗೆ ನಮಸ್ಕರಿಸುತ್ತಾ. )

ಸರಸ್ವತಿ – ಸ್ವಾಮೀ, ಇಂದಿಗೆ ನಮ್ಮ ಜನ್ಮ ಧನ್ಯವಾಯಿತು. ನನ್ನ ಸ್ವಾಮಿ ಬಹಳ ಕರುಣಾಮಯಿ !

ನಾಯಕ – ಯಾರು – ಆ ನಿನ್ನ ಸ್ವಾಮಿ ?

ಸರಸ್ವತಿ – ಪತಿತಜನೋದ್ಧಾರಕನೂ ! ಪರಮಪದನಾಥನೂ ! ಪರಮ ಕರುಣಾಳುವೂ ! ಪರಾತ್ಪರನೂ ಆದ ಪಾಂಡುರಂಗನೇ ಸ್ವಾಮಿ!

ನಾಯಕ – ...ಬೆಲ್ಲವಿದೆಯೇ ಎಂದರೆ ಅಲ್ಲವಿದೆ–ಎಂಬ ಅರ್ಥವಿಲ್ಲದ ಸಮಾಧಾನವನ್ನಲ್ಲ ನಾಕೇಳಿದ್ದು. ನಾನು ಕೇಳಿದ್ದು ಮೂಗುತಿ; ಅದೆಲ್ಲಿದೆ ?

ಸರಸ್ವತಿ – ಇದೋ! ಆಸ್ವಾಮಿ ಕರುಣಿಸಿಕೊಟ್ಟ ಮೂಗುತಿ ! !

( ಸರಸ್ವತಿ ಮೂಗುತಿಯನ್ನು ಕೊಡುವಳು. ನಾಯಕರು ದಿಗ್ಭ್ರಾಂತಿಯಿಂದ ಮೂಗುತಿಯನ್ನು ನೋಡಿ ತಕ್ಷಣ ತಮ್ಮಲ್ಲಿಟ್ಟುಕೊಂಡ ಡಬ್ಬಿಯನ್ನು ತೆಗೆದು ನೋಡುವರು. ಆದರೆ ಅದರಲ್ಲಿ ಮೂಗುತಿ ಕಾಣಿಸುವುದಿಲ್ಲ, ಆಶ್ಚರ್ಯ ಪಡುತ್ತಾ, ಭಯದಿಂದ ......)

ನಾಯಕ – ಆ! ಏನಿದಾಶ್ಚರ್ಯ! ಭ್ರಮೆಯಲ್ಲ ವಷ್ಟೆ! ಸ್ವಪ್ನವಲ್ಲವಷ್ಟೆ!! ಇಷ್ಟಕ್ಕೆ ಮುಂಚೆ ಆ ಬ್ರಾಹ್ಮಣ ಮಾರಲು ಬಂದ ಈ ಮೂಗುತಿಯನ್ನು ಪರೀಕ್ಷೆ ಮಾಡಿ ಕಳುವೆನೆಂದು, ಆತನನ್ನು ಅಂಗಡಿಯಲ್ಲೇ ಕೂಡಿಸಿ, ಭದ್ರವಾಗಿ ಸ್ವತಃ ಇದನ್ನು ತಂದು ಒಂದುಕ್ಷಣದಕೆಳಗೆ ಇದರಲ್ಲಿಟ್ಟು, ನನ್ನಲ್ಲೇ ಇಟ್ಟುಕೊಂಡೆ. ಮತ್ತೆ...ಮತ್ತೆ... ಈಗ ಆ ಮೂಗುತಿ ಇವಳ ಹತ್ತಿರ! ( ಸರಸ್ವತಿಯ ಹತ್ತಿರ ಬಂದು ಅವಳಕೈ ಹಿಡಿದುಕೊಂಡು ) ಸರಸ್ವತಿ! ಸರಸ್ವತಿ! ನಿಜಹೇಳು. ಏನೂ ಅರಿಯದವನಾಗಿದ್ದೇನೆ. ಹುಚ್ಚು ಹಿಡಿದಂತಾಗಿದೆ. ನನಗೆ ಏನೋ ಆಗುತ್ತಿದೆ. ನಡೆದ ಸಂಗತಿ ಹೇಳು. ಈ ಮೂಗುತಿ ನಿನ್ನ ಕೈಗೆ ಹೇಗೆ ಬಂತು? ನಿಜಹೇಳು ಸರಸ್ವತಿ, ನಿಜಹೇಳು.

ಸರಸ್ವತಿ – (ಕೈಜೋಡಿಸಿ) ಸ್ವಾಮಿ, ನನ್ನ ತಪ್ಪನ್ನು ಕ್ಷಮಿಸುತ್ತೀರಾ?

ನಾಯಕ – ಅಬ್ಬಾ!! ಈಗ ಇದೆಲ್ಲಾ ಬೇಡ. ನಡೆದ ವೃತ್ತಾಂತವನ್ನು ಮೊದಲು ಹೇಳು.

ಸರಸ್ವತಿ – ಆಗಲಿ ಸ್ವಾಮಿ. ನೀವು ಅಂಗಡಿಗೆ ಹೋದ ಮೇಲೆ, ನೀವು ಹೇಳಿದ ಆ ವಿಪ್ರೋತ್ತಮರು ಮಗನೊಡನೆ ಇಲ್ಲಿಗೆ ಬಂದು, ಮಗನ ಉಪನಯನ ಎಂದುಹೇಳಿ, ಈ ಮೂಗುತಿಯನ್ನು ದಾನವಾಗಿ ಕೊಡು ಎಂದು ಕೇಳಿದರು. ಅವರ ತೇಜಸ್ಸನ್ನೂ, ಮುಗುಳ್ನಗೆಯನ್ನೂ ನೋಡಿ ನಾನು ಮೈಮರೆತೆ. ಸಾಕ್ಷಾತ್ ವೈಕುಂಠಪತಿ ಶ್ರೀನಿವಾಸನೇ ಬಂದು ಬೇಡಿದಂತಿತ್ತು! ಮಹಾನಂದ ವಾಯಿತು. ಆ ತನ್ಮಯ ಸ್ಥಿತಿಯಲ್ಲಿ ನನಗರಿವಾಗದಂತೆಯೇ ಮೂಗುತಿಯನ್ನು ಅವರಿಗೆ ಸಮರ್ಪಿಸಿದೆ.

ನಾಯಕ – ಹಾಗಾದರೆ ಈಗ ನಿನ್ನ ಕೈಗೆ ಮೂಗುತಿ ಹೇಗೆ ಬಂತು ?

ಸರಸ್ವತಿ – ಸ್ವಾಮಿ,ಆ ಬ್ರಾಹ್ಮಣರುಮತ್ಯಾರೋ ಅಲ್ಲ – ಅಖಿಳಾಂಡಕೋಟಿ ಬ್ರಹ್ಮಾಂಡನಾಯಕನೂ, ಆದ್ಯಂತರಹಿತನೂ, ಆರ್ತತ್ರಾಣ ಪರಾಯಣನೂ, ಆದಶ್ರೀಹರಿಯೇ! ಪಾಪಿಷ್ಠರಾದ ನಮ್ಮನ್ನುದ್ಧರಿಸುವುದಕ್ಕಾಗಿ ಪರಮಪದದಿಂದ ಪಾದಚಾರಿಯಾಗಿ ಬಂದ!

ನಾಯಕ – ಏನು !!!

ಸರಸ್ವತಿ – ಹೌದುಸ್ವಾಮಿ, ಆಗ್ರಹದಲ್ಲಿ ನೀವಂದ ಕಠಿಣ ಮಾತಿನಿಂದ ಭೀತಳಾದ ನಾನು, ಬೇರೆದಾರಿಗಾಣದೆ, ಪ್ರಾಣತ್ಯಾಗ ಮಾಡಲು ನಿಶ್ಚೈಸಿ, ಇದೋ, ಈ ದ್ರಾವಕವನ್ನು ಕುಡಿಯಲು ಸನ್ನದ್ಧಳಾದೆ. ಅಷ್ಟರಲ್ಲಿ ......

ನಾಯಕ – ಅಷ್ಟರಲ್ಲಿ !!!

ಸರಸ್ವತಿ – (ಆನಂದದಿಂದ) ಆ ಭಕ್ತಬಂಧುವೂ ಭಕ್ತವತ್ಸಲನೂ ಆದ ಶ್ರೀಹರಿಯು ಎಂದೂ ಕೇಳದ, ಚರಾಚರಾತ್ಮಕವಾದ ಜಗತ್ತನ್ನೇ ಮೋಹಗೊಳಿಸುವ, ಗಂಭೀರ ಕಂಠದಿಂದ "ಸಾಧ್ವೀ, ಪ್ರೀತನಾದೆ. ಇದೋ ನೀಕೊಟ್ಟ ಮೂಗುತಿ. ಮುಕ್ತಿಯ ಮಹಿಮೆಯ ಮೂಗುತಿಯನ್ನು ಧಾರೆ ಎರೆದು, ಮುಕ್ತಿದಾತನಾದ ನನ್ನನ್ನೇ ಕೊಂಡೆ. ಶುಭಮಸ್ತು" ಎಂದು ಹರಸಿದ. ಅಷ್ಟೇ! ಮೇಲಿಂದ ಈ ಮೂಗುತಿ ನನ್ನ ಮುಂದೆಬಿತ್ತು. ಆ ಮಧುರ ಗಂಭೀರ ಕಂಠಧ್ವನಿ ಈಗಲೂ ಕಿವಿಗೆ ಕಟ್ಟಿದಂತಿದೆ. ಸ್ವಾಮಿ, ಆ ಬಂದ ಬ್ರಾಹ್ಮಣೋತ್ತಮ ನಿಸ್ಸಂದೇಹ ವಾಗಿಯೂ ಪಾಂಡುರಂಗನೇ ಸ್ವಾಮಿ! ಆತನು ಪಾಂಡುರಂಗನೇ !!

(ನಾಯಕರು ಕಣ್ಣಲ್ಲಿ ಆನಂದಬಾಷ್ಪಗಳನ್ನು ಸುರಿಸುತ್ತಾ ಸರಸ್ವತಿಯ ಕೈಯನ್ನು ಹಿಡಿದುಕೊಂಡು)

ನಾಯಕ – ಸರಸ್ವತೀ, ಸರಸ್ವತೀ, ನೀನೆಷ್ಟು ಭಾಗ್ಯವಂತೆ !! ನಿನ್ನ ಜನ್ಮವೇ ಧನ್ಯ! ಸರಸ್ವತೀ, ಸರಸ್ವತೀ, ನೀನಂದ ಮಾತು ಸತ್ಯ! ಸಂದೇಹ ವಿಲ್ಲ; ಆ ಬ್ರಾಹ್ಮಣ ನನ್ನ ಶ್ರೀಹರಿಯೇ! ಅಜ್ಞಾನದಲ್ಲಿ ಬಿದ್ದು ಬಳಲುತ್ತಿರುವ ನನ್ನಲ್ಲಿ ಕರುಣಿಸಿ ಧಾವಿಸಿ ಬಂದ ಪರಾತ್ಪರನು ಆತನೇ! (ದುಃಖಿಸುತ್ತಾ) ಶ್ರೀಹರೀ, ... ಪಾಂಡುರಂಗಾ, ಅಲ್ಲಗಳೆದೆನೋ, ಜರಿದೆನೋ ನಿನ್ನನ್ನು! ನಿನಗಾಗಿ ತಿರುಗಬೇಕಾದ ನಾನು ನಿನ್ನನ್ನೇ ನನ್ನ ಸುತ್ತಲೂ ತಿರುಗುವಂತೆ ಮಾಡಿದೆನೋ! ಕಣ್ಣೆದುರು ಬಂದು ನಿಂತು ನಲಿದಾಗಲೂ ನೋಡದೇ, ಮಾತಾಡದೇ, ತಿರಸ್ಕರಿಸಿದ ಪರಮ ಪಾಪಿಯೋ ನಾನು! ಪರಮಪಾಪಿ! (ಹಣೆ ಹಣೆ ಬಡೆದು ಕೊಳ್ಳುತ್ತಾ ಅಳುವರು.) ಜಗನ್ನಾಥ! ಜಗನ್ನಾಥ! ನಿನ್ನನ್ನು ಕಳ್ಳನೆಂದು ಸಂಬೋಧಿಸಿದೆನಲ್ಲಾ! ನಾನೆಷ್ಟು ಪಾಪಿ! ನಾನೆಷ್ಟು ಪಾಪಿ! (ಎಂದುರೋದಿಸುವರು)

ಸರಸ್ವತಿ – ಸ್ವಾಮಿ, ಸ್ವಾಮಿ, ಚಿಂತಿಸಬೇಡಿ; ಶ್ರೀಹರಿಯು ಭಕ್ತಾಪರಾಧಸಹಿಷ್ಣು.!

ನಾಯಕ – ಹೌದು ಸರಸ್ವತಿ ಹೌದು. ನನ್ನ ಕೃಷ್ಣ ನಿಜವಾಗಿಯೂ ಕಳ್ಳನೇ! ನನ್ನಂಥಾ ಪರಮ ಪಾಪಿಗಳು ಸಂಪಾದಿಸಿದ ಪಾಪದ ಗಂಟನ್ನು ಅಪಹರಿಸುವ ಮಹಾಕಳ್ಳನು! ಸರಸ್ವತೀ, ಸರಸ್ವತೀ, ಆಸ್ವಾಮಿ ಬಂದು ನನ್ನಲ್ಲಿ ಏನೆಂದನು ಗೊತ್ತೇ...?

ಸರಸ್ವತಿ – ಆ ನನ್ನ ಮುದ್ದು ರಂಗ ಏನೆಂದ ಸ್ವಾಮಿ ?

ನಾಯಕ – "ನಾಯಕರೇ, ನಾನು ಯಾರನ್ನೂ ಯಾಚಿಸುವವನಲ್ಲ; ನನ್ನವರನ್ನೇ ಯಾಚಿಸುತ್ತೇನೆ." ಆಹಾ! ಆಹಾ! ಸ್ವಾಮೀ, ನಾನು ನಾನು ನಿನ್ನವನೇ! ಸ್ವಾಮೀ, ಏನೋ ನಿನ್ನ ಸವಿನುಡಿ! ನಿನ್ನ ಭಕ್ತಾಪರಾಧಸಹಿಷ್ಣುತೆಗೆ ಕೊನೆ ಇಲ್ಲ! ಹುಲು ಮಾನವನಾದ ನಾನೆಲ್ಲಿ, ಎಲ್ಲರೊಳು ನೆಲಸಿ ಕೈವಲ್ಯವೀವ ಫುಲ್ಲನಾಭಾ...... ಶ್ರೀಹರೀ ನೀನೆಲ್ಲಿ !! ನಿನ್ನ ಭಕ್ತವಾತ್ಸಲ್ಯತೆ ಯನ್ನು ಅರಿಯದೇ ಹೋದೆನಲ್ಲ! ಕೈಗೆ ಸಿಕ್ಕ ರತ್ನವನ್ನು ಕಳೆದು ಕೊಂಡಂತಾಯಿತೇ ಈ ನನ್ನ ವ್ಯವಹಾರ!

ಉಗಾಭೋಗ

ಅಣುರೇಣು ತೃಣದಲ್ಲಿ ಪರಿಪೂರ್ಣನಾಗಿರುವ
ಗುಣವಂತನೇ ನಿನ್ನ ಮಹಿಮೆ ಗಣನೆ ಮಾಡುವರಾರು
ಎಣಿಸಿ ನೋಡುವಳಿನ್ನು ಏಣಾಕ್ಷಿ ಸಿರಿದೇವಿ
ಜ್ಞಾನ ಸುಗುಣ ತತ್ತ್ವ ವೇಣುಗೋಪಾಲ ಹರೇ
ಕಾಣಿಸೋ ನಿನ್ನ ಮಹಿಮೆ ॥

(ಎಂದು ಹೇಳಿ ದಾಸರು ಮೈಮರೆತು ನಿಲ್ಲುವರು.)

(ಪತಿಯ ಸ್ಥಿತಿಯನ್ನು ಕಂಡು ಆನಂದದಿಂದ)

ಸರಸ್ವತಿ – ಸ್ವಾಮಿ...ಸ್ವಾಮಿ ..ಕೃಷ್ಣಾ, ನಮ್ಮ ಜನ್ಮ ಧನ್ಯಮಾಡಿದೆಯಾ ತಂದೆ !

ನಾಯಕ – (ಎಚ್ಚೆತ್ತು) ಹರೀ...ಎನ್ನಪ್ಪ...ಎನ್ನಣ್ಣ...ಎನ್ನದೈವವೇ–ಎನ್ನ ಮನೋವಲ್ಲಭನೇ, ಇಲ್ಲಿಗೆ ಬಂದು ನಿಂತು ನಿನ್ನ ಪಾದಧೂಳಿ ಯನ್ನು ಹಾಕಿದೆಯಾ! ರಂಗಾ... ಪಾಂಡುರಂಗ! ಯಾವ ಪಾದರೇಣುವಿಗಾಗಿ ಬ್ರಹ್ಮಾದಿ ದೇವತೆಗಳು ಶಿರಬಾಗಿ ಸಂತತ ನಿಲ್ಲುವರೋ, ಯಾವ ಪಾದರೇಣುವಿನಲ್ಲಿ ಅಕ್ರೂರಾದಿ ಮಹಿ ತಾತ್ಮರು ಹಾಡಿ ಹೊರಳಿ ಮೈಮರೆತು ಪುನೀತರಾದರೋ, ಯಾವ ಪಾದರೇಣು ಕಠಿಣಶಿಲೆಯನ್ನು ಕೋಮಲಾಂಗಿ ಯನ್ನಾಗಿ ಮಾಡಿತೋ, ಅಂಥಾ ಪರಮ ಪವಿತ್ರವಾದ ನಿನ್ನ ಶ್ರೀಪಾದರೇಣು . ಅಲ್ಪನಾದ ನನ್ನ ಈಮನೆಯಲ್ಲಿ !! ಕೃಷ್ಣಾ, ನಾನೇ ಧನ್ಯ! ನಾನೇ ಧನ್ಯ !!

(ಎಂದು ಹೇಳುತ್ತಾ, ನಾಯಕರು ಮೈಮರತು ಅಸ್ಥಳದ ಪಕ್ಕ ದಲ್ಲಿ ಕೂತು, ಕೈಯಿಂದ ಭೂಮಿಯನು ಒರೆಸುತ್ತಾ, ಆ

ಧೂಳನ್ನು ಮೈಗೆ ಹಚ್ಚಿಕೊಳ್ಳುತ್ತಾ, ಸರಸ್ವತಿಗೆ ಹಚ್ಚುತ್ತಾ,
ಹುಚ್ಚರಂತೆ ಮಹದಾನಂದದಿಂದ)
ಸರಸ್ವತೀ, ಸರಸ್ವತೀ, ಇದೋ, ಇದೋ, ಇಲ್ಲಿ ನೋಡು;
ನಮ್ಮಪ್ಪನ ಪಾದರೇಖೆಗಳು !!

ರಾಗ– ತಾಳ–

ಇಕೋ ನೋಡೆ ರಂಗನಾಥನ ಚಿಕ್ಕಪಾದವ
ಸಿಕ್ಕಿತೆ ಶ್ರೀಲಕ್ಷ್ಮೀಪತಿಯ ದಿವ್ಯ ಪಾದವ ॥ ಪ ॥

ಶಂಖ ಚಕ್ರ ಗದಾ ಪದ್ಮ ಅಂಕಿತ ಪಾದವ
ಅಂಕುಶ ಕುಲಿಶ ಧ್ವಜರೇಖಾ ಅಂಕಿತ ಪಾದವ
ಪಂಕಜಾಸನನ ಹೃದಯದಲ್ಲಿ ನಲಿಯುವ ಪಾದವ
ಸಂಕಟ ಹರಣ ವೆಂಕಟೇಶನ ದಿವ್ಯ ಪಾದವ ॥ 1 ॥

ಲಲನೆ ಲಕ್ಷ್ಮೀ ಅಂಕದಲ್ಲಿ ನಲಿಯುವ ಪಾದವ
ಜಲಜಾಸನನ ಅಭೀಷ್ಟವೆಲ್ಲ ಸಲಿಸುವ ಪಾದವ
ಮಲ್ಲರ ಗೆಲಿದು ಕಂಸಾಸುರನ ಕೊಂದ ಪಾದವ
ಬಲಿಯ ಮೆಟ್ಟಿ, ಭಾಗೀರಥಿಯ ಪಡೆದ ಪಾದವ ॥ 2 ॥

ಬಂಡೆಯ ಬಾಲೆಯ ಮಾಡಿದ ಉದ್ದಂಡ ಪಾದವ
ಬಂಡಿಲಿದ್ದ ಶಕಟಾಸುರನ ಒದ್ದ ಪಾದವ
ಅಂಡಜ ಹನುಮರ ಭುಜದೊಳುಪ್ಪುವ ಪಾದವ
ಕಂಡೇವೇ ಶ್ರೀರಂಗ ವಿಠಲನ ದಿವ್ಯ ಪಾದವ ॥ 3 ॥

ಸರಸ್ವತೀ, ಆಶಾಪಾಶಾದಿಗಳಿಂದ ದೂರಳಾಗಿ ಲಕುಮೀವಲ್ಲಭಗೆ
ಮೂಗುತಿ ಇತ್ತ ನೀನೇ ಧನ್ಯಳು. ಸರ್ವ ಸಂಪತ್ಪ್ರದಾತ ನಾದ,
ಶಂಖ ಚಕ್ರ ಗದಾ ಪದ್ಮ ಧಾರಿಯಾದ ಶ್ರೀಹರಿಯ ಅಭಯಹಸ್ತ
ಕೆಳಗಾಗುತ್ತಿರಲು, ನಿನ್ನ ಕೈ ಮೇಲಕ್ಕೆ:
ಅಹಾ ! ಸರಸ್ವತೀ, ನಿನ್ನ ಭಾಗ್ಯವೇ

ಭಾಗ್ಯ! ನಿನ್ನಂಥಾ ಸತಿಯನ್ನು ಪಡೆದ ನಾನೇ ಪುಣ್ಯವಂತ !!

– ಸ್ವಾಮಿ, ಹಾಗೆನ್ನ ಬೇಡಿ. ನಿಮ್ಮಿಂದಲೇ ನನ್ನ ಜನ್ಮ ಧನ್ಯ
ವಾಯಿತು. ನಿಮಗಾಗಿ ಶ್ರೀಹರಿಯೇ ಬಂದನಲ್ಲ ! ನಿಮ್ಮಿಂದ
ತಾನೇ ನನಗೆ ಈ ಅದೃಷ್ಟ ! ಇಂದಿನ ದಿನವೇ ಸುದಿನ ! ನಮ್ಮ
ಮನೆ ನಿಜವಾಗಿಯೂ ಇಂದಿಗೆ ಬೆಳಗಿತು !

ನಾಯಕ – ಹೌದು ಸರಸ್ವತೀ, ಹೌದು. ಧನಮದದಿಂದ ಕೊಬ್ಬಿ ಉಬ್ಬಿದ ನನ್ನ ಗರ್ವ ಅಳಿಯಿತು. ಸರಸ್ವತೀ, ಇನ್ನು ಈ ಸಂಪತ್ತಿಗೆ ನಮೋನಮಃ. (ಎಂದು ಹೇಳಿ ಕೊರಳಲ್ಲಿರುವ ಮುತ್ತಿನಹಾರ ಪದಕಗಳನ್ನು ಮತ್ತು ಜರಿ ಮುಂಡಾಸು, ಉಂಗುರ ಮೊದಲಾದ ತಾವು ಧರಿಸಿದ ಆಭರಣಗಳನ್ನು ತೆಗೆದಿಟ್ಟು)

'ಕೃಷ್ಣಾರ್ಪಣಮಸ್ತು'. ಹರೀ, ನನ್ನ ಸರ್ವಸ್ವವನ್ನೂ ನಿನ್ನ ಅಡಿದಾವರೆ ಗಳಿಗೆ ಅರ್ಪಿಸಿರುವೆನು. ನಿಜವಾದ ಸಂಪತ್ತನ್ನು ಕೊಟ್ಟು ಉದ್ಧರಿಸು! ಸರಸ್ವತೀ, ಇನ್ನು ಗೋಪಾಳವೇ ನಮ್ಮ ವ್ಯಾಪಾರ. ದಾಸಪಂಥವೇ ನಮ್ಮ ಹಿರಿಮೆ. ಹರಿನಾಮಸಂಕೀರ್ತನವೇ ನಮ್ಮ ಜೀವನದ ನಿತ್ಯ ನೈಮಿತ್ತಿಕ ಕರ್ಮ. ತಂಬೂರಿ ಮೀಟುತ್ತಾ ಹರಿನಾಮ ಸುಗಂಧವನ್ನು ಸರ್ವತ್ರ ಬೀರುತ್ತಾ, ಸಾಧುಸಜ್ಜನರ ಸಂಗದಲ್ಲಿ ಸಾಗಿ ಚಲಿಸೋಣ.

ಸರಸ್ವತಿ – ಬಹಳ ಸಂತೋಷ ಸ್ವಾಮಿ. ಸ್ವಾಮೀ, ಮರೆತೆ. ನೀವು ತಂಬೂರಿ ಎನಲು ಜ್ಞಾಪಕವಾಯ್ತು!

ನಾಯಕ – ಏನದು ಸರಸ್ವತಿ ?

ಸರಸ್ವತಿ – ಬ್ರಾಹ್ಮಣ ವೇಷಧಾರಿಯಾದ ಆ ಶ್ರೀಹರಿ, ಮೂಗುತಿ ತೆಗೆದು ಕೊಂಡು ಹೋಗುವುದಕ್ಕೆ ಮುನ್ನ, ತಂಬೂರಿ, ಚಿಟಿಗೆ, ಗೋಪಾಳಬುಟ್ಟಿ ಗಳನ್ನು ಕೊಟ್ಟು, "ಅಮ್ಮಾ, ಇವು ನನಗೆ ಅತಿಪ್ರಿಯವಾದವು. ಇವನ್ನು ನಿನ್ನಲ್ಲಿರಿಸಿಕೊ, ಬೇಕಾದರೆ, ನೀವೇ ಉಪಯೋಗಿಸಿಕೊಳ್ಳಿ" ಎಂದುನುಡಿದು ನಡೆದ. ಸ್ವಾಮಿ, ಅವನ್ನು ತರಲೇ ?

ನಾಯಕ – (ಆನಂದದಿಂದ) ಸರಸ್ವತೀ, ನಿಜವೆ! ನನ್ನ ಸ್ವಾಮಿ ನನಗಾಗಿ ತಾನೇ ತಂಬೂರಿ, ಚಿಟಿಗೆ, ಗೋಪಾಳಬುಟ್ಟಿಗಳನ್ನು ತಂದಿತ್ತನೇ! ನಿಜ ಸಂಪತ್ತನ್ನು ಅನುಗ್ರಹಿಸಿದನೆ! ಎಲ್ಲಿ ತೋರಿಸು! ನಮ್ಮಪ್ಪನ ಕೈಸ್ಪರ್ಶದಿಂದ ಪಾವನವಾದ ಆ ಮಹಾ ಪ್ರಸಾದವನ್ನು ತೋರಿಸು!! ಶೀಘ್ರ ತೆಗೆದು ಕೊಂಡು ಬಾ ಸರಸ್ವತೀ.

ಸರಸ್ವತಿ – ಅಜ್ಞೆ ಸ್ವಾಮಿ.–
(ಎಂದುಹೇಳಿ ಅವುಗಳನ್ನು ತರಲು ಒಳಗೆ ಹೋಗುವಳು.)

ನಾಯಕ – ಶ್ರೀಹರೀ, ತಂದೆ! ಎಷ್ಟು ಕರುಣೆಯೋ ನಿನಗೆ ನನ್ನಲ್ಲಿ: ನಿಜ ಸ್ವರೂಪ ಜ್ಞಾನವನ್ನೇ ತಂದಿತ್ತಿಯಾ! ಜ್ಞಾನಾಜ್ಞಾನಗಳೆ

ರಡೂ ನಿನ್ನಾಧೀನ. ನಿನ್ನ ಆಜ್ಞಾಧಾರಿಯಾದ ದಾಸಾನು ದಾಸನು ನಾನು. ಈದೇಹ ಇನ್ನು ನಿನಗೆ ಮೀಸಲೋ ತಂದೆ. ಆತ್ಮೋದ್ಧಾರಕ ಗುರುಗಳನ್ನು ತೋರಿಸು. (ಹಿನ್ನೆಲೆಯಿಂದ) "ದಾಸಾಗ್ರಣೀ, ವಿಜಯನಗರವೇ ಇನ್ನು ನಿನಗೆ ವಾಸಯೋಗ್ಯ ವಾದ ಸ್ಥಾನ. ವ್ಯಾಸರಾಯರೇ ನಿನ್ನ ಆತ್ಮೋದ್ಧಾರಕ ಗುರುಗಳು. ಮುಂದೆ ಪುರಂದರದಾಸನೆಂದು ಪ್ರಸಿದ್ಧನಾಗು. ಶುಭಮಸ್ತು."

ನಾಯಕ – ಧನ್ಯ, ಪ್ರಭೋ, ಧನ್ಯ.!!
(ಇಷ್ಟರಲ್ಲಿ ಸರಸ್ವತೀ ಬಾಯಿಯವರು ತಂಬೂರಿ ಮೊದಲಾದುವು ಗಳನ್ನು ತೆಗೆದುಕೊಂಡು ಪ್ರವೇಶಿಸುವರು. ನಾಯಕರು ಆನಂದ ದಿಂದ ತಂಬೂರಿಯನ್ನು ಕೈಯಲ್ಲಿ ತೆಗೆದುಕೊಂಡು, ಎದೆಗೆ ಒತ್ತಿ ಕೊಳ್ಳುತ್ತಾ, ಕಣ್ಣಿಗೆ ಹಚ್ಚಿಕೊಳ್ಳುತ್ತಾ, ಕೊರಳಲ್ಲಿ ಹಾಕಿ ಕೊಳ್ಳುವರು. ಗೋಪಾಳಬುಟ್ಟಿಯನ್ನು ಸಹಕೈಗೆ ತೆಗೆದು ಕೊಂಡು ಆನಂದಿಸುತ್ತಾ ತಲೆಯ ಮೇಲೆ ಇಟ್ಟುಕೊಂಡು ಕಣ್ಣಿಗೆ ಒತ್ತಿ ಕೊಳ್ಳುತ್ತಾ "ಆಹಾ..ಆಹಾ..ಸ್ವಾಮೀ, ಮಹಾಪ್ರಸಾದ ಕರುಣಾಮಯ, ನಮೋ ನಮಃ" ಇವೇ ಮೊದಲಾದ ಶಬ್ದ ಗಳನ್ನು ಮಧ್ಯ ಮಧ್ಯದಲ್ಲಿ ಹೇಳುವರು. ಎಲ್ಲವನ್ನೂ ತೆಗೆದು ಕೊಂಡು)

ನಾಯಕ – ಸರಸ್ವತೀ, ನಿನ್ನಿಂದ ಇಂದಿಗೆ ನನ್ನ ಜನ್ಮ ಧನ್ಯವಾಯಿತು. ನೋಡು, ಭಗವದಾಜ್ಞೆಯಂತೆ. ಇನ್ನು ನಮಗೆ ಗುರುಗಳು ಯತಿವರೇಣ್ಯರಾದ, ಪ್ರಹ್ಲಾದಾವತಾರರಾದ, ಶ್ರೀವ್ಯಾಸ ರಾಯರೇ. ವಿಜಯನಗರವೇ ನಮಗೆ ಗಮ್ಯಸ್ಥಾನ. ಮಕ್ಕಳನ್ನು ಗುರುಗಳಿಗೊಪ್ಪಿಸಿ, ಅವರ ಪಾದಸೇವೆಯಲ್ಲಿ ಕಾಲ ಕಳೆಯುವ. ನಡೆ, ಪ್ರಯಾಣಕ್ಕೆ ಸನ್ನದ್ಧಳಾಗು.

ಸರಸ್ವತಿ – ಆಜ್ಞೆ ಸ್ವಾಮಿ.
ಜೈಜೈವಿಠಲ ಪಾಂಡುರಂಗ । ಜೈಜೈವಿಠಲ ಪಾಂಡುರಂಗ
ಪಂಢರಿನಾಥವಿಠಲ । ಪಾಂಡುರಂಗ ವಿಠಲ
ವಿಠಲ ವಿಠಲ ವಿಠಲ ವಿಠಲ ವಿಠಲ ವಿಠಲ
(ಎಂದು ಪರವಶರಾಗಿ ಹಾಡುತ್ತಾ ಕುಣಿಯುವರು.)
ಮೆಲ್ಲನೆ ತೆರೆ ಬೀಳುವುದು.

ದ್ವಿತೀಯಾಂಕವು ಸಮಾಪ್ತವಾಯಿತು
ಮಧ್ವೇಶಾರ್ಪಣಮಸ್ತು

# ಮೂರನೇ ಅಂಕ

## ವಿಷ್ಕಂಭಕ

ಪ್ರಾತಃಕಾಲ. ಸುಮಾರು 7 ಗಂಟೆಯ ಸಮಯ. ರಾಮಾಚಾರ್ಯರು (ವಯಸ್ಸು 70 ವರುಷ) ತುಳಸೀ ಬುಟ್ಟಿಯನ್ನು ಹಿಡಿದುಕೊಂಡು ಪ್ರವೇಶಿಸುತ್ತಾರೆ.

## ಉಗಾಭೋಗ

ರಾಮಾಚಾರ್ಯರು :– " ಜಗವಸುತ್ತಿಹುದೆಲ್ಲ ನಿನ್ನ ಮಾಯವಯ್ಯ
ನಿನ್ನ ಸುತ್ತಿಹುದೆನ್ನ ಮನವಯ್ಯ
ಜಗಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು.
ಮೂರು ಜಗವು ನಿನ್ನೊಳಗೆ ನೀನು ಎನ್ನೊಳಗೆ
ಕರಿಯು ಕನ್ನಡಿಯಲ್ಲಿ ಅಡಗಿಪ್ಪ ತೆರನಂತೆ
ಎನ್ನೊಳು ಅಡಗಿದೆಯೋ ಪುರಂದರವಿಠಲಾ " ॥

ಅಹಾ! ಎಷ್ಟು ಮಧುರವಾಗಿದೆ! ಪ್ರತಿಪದದಲ್ಲೂ ಮಾಧುರ್ಯವು ತುಂಬಿ ಹರಿಯುತ್ತಿದೆ! ಒಂದೊಂದು ಶಬ್ದವೂ ಮುಕ್ತಿಗೆ ಸೋಪಾನ ದಂತಿದೆ! ಅಹಾ! ಅಹಾ!!

( ಸುಮಾರು 70 ವರ್ಷ ವಯಸ್ಸಿನ ಕೃಷ್ಣಾಚಾರ್ಯರು ಪ್ರವೇಶಿಸಿ )

ಕೃಷ್ಣಾಚಾರ್ಯ– ನಮಸ್ಕಾರ ರಾಮಾಚಾರ್ಯರಿಗೆ; ನಿಮ್ಮೊಳಗೆ ನೀವೇ ಆನಂದ ಅನುಭವಿಸುತ್ತಾ ಇದ್ದೀರಲ್ಲ!

ರಾಮಾ – ಓ...ಕೃಷ್ಣಾಚಾರ್ಯರಾ, ನಮಸ್ಕಾರ, ನಮಸ್ಕಾರ; ಏನು, ನೀವು ನಿನ್ನೆ ಮಠದಲ್ಲಿ ಕಾಣಲೇ ಇಲ್ಲವಲ್ಲ.

ಕೃಷ್ಣ – ಹೌದು. ಸ್ವಲ್ಪ ಕೆಲಸದಮೇಲೆ ಊರಿಗೆ ಹೋಗ ಬೇಕಾಗಿತ್ತು. ಈಗಲೇ ಅರುಣೋದಯಕ್ಕೆ ಬಂದೆ.

ರಾಮಾ – ಅಯ್ಯಯ್ಯೋ! ನಿಮ್ಮಂಥಾ ಸುಜೀವಿಗಳು ಭಾಗವಹಿಸಿ ಆನಂದ ಅನುಭವಿಸಬೇಕಾದ ಸುದಿನ, ನಿನ್ನಿನದಿನ!

ಕೃಷ್ಣಾ – ಏನು ವಿಶೇಷ! ಮಠದಲ್ಲಿ ವ್ಯಾಸರಾಯ ಪ್ರಭುಗಳು ದೀನ ಜನೋದ್ಧಾರಕ್ಕಾಗಿ ಹೊಸಾಗ್ರಂಥವನ್ನೇನಾದರೂ ಪ್ರಕಟಿಸಿದರೇ!

ರಾಮಾ – ಅದೇನಿಲ್ಲ; ಪುರಂದರದಾಸರು ಮಾಡಿದ ಹಾಡುಗಳಿಗೆಲ್ಲಾ "ಪುರಂದರೋಪನಿಷತ್" ಎಂಬ ಬಿರುದನ್ನು ದಯಪಾಲಿಸಿ, ಅವರ ಕೃತಿಗಳನ್ನು ವ್ಯಾಸಪೀಠದಲ್ಲಿಟ್ಟು, ಗೌರವಿಸಿದರು. ದಾಸರು ಪರವಶರಾಗಿ ಒಂದೊಂದು ಹಾಡನ್ನು ಹೇಳುವುದು, ಗುರುಗಳು ಸ್ವತಃ ಆಹಾಡಿನ ಮರ್ಮವನ್ನು, ಉಪನಿಷತ್ ಮೊದಲಾದ ವಾಕ್ಯಗಳಿಂದ ಸಮರ್ಥಿಸುವುದು! ಆ ಆನಂದವೇ ಆನಂದ!! ಹೊತ್ತೇ ಗೊತ್ತಾಗಲಿಲ್ಲ! ಗುರುಗಳೆಂದರೆ ವ್ಯಾಸರಾಯ ಪ್ರಭುಗಳೇ! ಶಿಷ್ಯರೆಂದರೆ ಪುರಂದರದಾಸರೆ! ಇಂಥಾ ಗುರು ಶಿಷ್ಯ ಭಾವವನ್ನು ಎಲ್ಲೂ ನೋಡಲಾರೆವು.

ಕೃಷ್ಣಾ – ರಾಮಾಚಾರ್ಯರೇ, ಎಷ್ಟು ಪುಣ್ಯವಂತರಪ್ಪ ನೀವು! ನನಗೆ ಆಭಾಗ್ಯ ಇಲ್ಲದೇ ಹೋಯಿತಲ್ಲ! ನೀವು ಹೇಳುತ್ತಿದ್ದರೇನೇ ನನ್ನ ಮೈರೋಮಾಂಚವಾಗುತ್ತಾ ಇದೆ! ವ್ಯಾಸರಾಯರಂಥಾ ಮಹಿತಾತ್ಮರ ಕರುಣೆಗೆ ಪಾತ್ರರಾದ ಪುರಂದರದಾಸರೇ ಧನ್ಯರು! ಹಿಂದೆ ಇದೇಕಣ್ಣಿನಿಂದಲೇ ನೋಡಿದ್ದೆವಲ್ಲ – ನಾಯಕರಾಗಿದ್ದಾಗ ದಾಸರ ಅಟ್ಟಹಾಸ, ಲೋಭ! ಈಗ ಆಲೋಭವೆಲ್ಲವೂ ಪರಮಾತ್ಮನ ಗುಣಗಾನದಲ್ಲಿ ಬಂದು ಸೇರಿದೆ. ಎಲ್ಲಿ ಪುರಂದರಗಡ! ಎಲ್ಲಿ ವಿಜಯನಗರ! ಸರ್ವಸ್ವವನ್ನೂ ತ್ಯಾಗ ಮಾಡಿ, ಹೆಂಡತಿ ಮಕ್ಕಳೊಡನೆ ಕಾಲ್ನಡಿಗೆಯಿಂದ ಬಂದು, ಗುರುಗಳ ಅಡಿದಾವರೆಗಳಲ್ಲಿ ಶಿರಬಾಗಿ ನಿಂತರಲ್ಲ! ಆದೃಶ್ಯ, ಇಂದಿಗೂ ನೆನೆದರೆ ಸಾಕು, ಕಣ್ಮುಂದೆ ಬಂದು ನಿಲ್ಲುವುದು!

ರಾಮಾ – ಹೌದು ಆಚಾರ್ಯರೆ; ಅದೊಂದು ಮರೆಯಲಾಗದ ಅಪೂರ್ವ ದೃಶ್ಯ.

ಕೃಷ್ಣಾ – ಅಲ್ಲ, ಒಂದು ಕಾಸು ಹೋದರೇನೇ ಹೋ–ಅಂತ ಅಳುತ್ತೇವೆ; ನವಕೋಟಿಗಳೆಂದರೆ ಸಾಮಾನ್ಯವೇ! ಎಲ್ಲವನ್ನೂ "ಕೃಷ್ಣಾರ್ಪಣಮಸ್ತು" ಎಂದರಲ್ಲ! ಏನು ವೈರಾಗ್ಯ !! ಏನು ವೈರಾಗ್ಯ!!

ರಾಮಾ – ಇವರೆಲ್ಲಾ ಕಾರಣಜನ್ಮರು. ಇಂಥಾ ಮಹನೀಯರ ಸಂಗ, ದರ್ಶನ, ಅವರ ಭಗವದ್ವಿಷಯಕೋಪನ್ಯಾಸಶ್ರವಣ, ಈ ಜನ್ಮಕ್ಕೆ ದೊರೆಯಿತಲ್ಲ, ಇಷ್ಟೇ ಸಾಕು.

ಕೃಷ್ಣಾ – ಅದೂ ಸರೀನೆ; (ರಾಮಾಚಾರ್ಯರು ಹೊರಡಲು ಉದ್ಯುಕ್ತರಾಗುವರು.) ಏನು, ಮಠದ ಕಡೆಗೇನಾ? ಸ್ನಾನ ಮಾಡಿಕೊಂಡು ನಾನೂ ಬರುತ್ತೇನೆ. ನಿನ್ನೆ ಒಂದುದಿನ ದಾಸರನ್ನೂ ವ್ಯಾಸ

ರನ್ನು. ನೋಡಬೇಕಿದ್ದುದಕ್ಕೆ ಎಷ್ಟೋದಿವಸಗಳಾದಂತಿದೆ
(ಇಷ್ಟರಲ್ಲಿ ಹಿನ್ನೆಲೆಯಿಂದ ಪುರಂದರದಾಸರ
"ದಾಸನ್ನ ಮಾಡಿಕೊ ಎನ್ನ–ಸ್ವಾಮಿ
ಸಾಸಿರನಾಮದ ವೆಂಕಟರಮಣ" ॥ ಪ ॥

ಎಂಬ ಹಾಡು ಕೇಳಿಸುವುದು........)

ರಾಮಾ – ಅಗೋ, ದಾಸರನ್ನು ನೆನೆಸಿದಿರಿ; ದಾಸರ ಹಾಡೇ ಕೇಳಿಸುತ್ತಾ ಇದೆ. ಗೋಪಾಳಕ್ಕೆ ಹೊರಟಂತಿದೆ.

ಕೃಷ್ಣಾ – (ನಗುತ್ತಾ) ವೈರಾಗ್ಯದಮೂರ್ತಿಯೇ ಆದ ದಾಸರಿಗೆ ಊರನ್ನು ಪಾವನ ಮಾಡಲು ಈ ಗೋಪಾಳ ಒಂದು ನಿಮಿತ್ತ. ಬರುತ್ತೇನೆ; ನಮಸ್ಕಾರ.

ರಾಮಾ – ...ನಾನೂ ಬರುತ್ತೇನೆ; ನಮಸ್ಕಾರ.

(ಇಬ್ಬರೂ ಹೊರಟು ಹೋಗುವರು.)

ವಿಷ್ಕಂಭಕವು ಸಮಾಪ್ತವಾಯಿತು

# ಅಂಕಪ್ರಾರಂಭ

(ಇಷ್ಟರಲ್ಲಿ ಹಿನ್ನೆಲೆಯಿಂದ ತಾಳತಮ್ಮಟೆಗಳ ಶಬ್ದ ಕೇಳಿಸುವುದು. ಹನುಮಪ್ಪ, ನರಸಪ್ಪ, ರಾಮಪ್ಪ ಎಂಬ ಮೂವರು ಬಂಧು ಮಿತ್ರರೊಡನೆ ಕುಣಿಯುತ್ತಾ, ಹಾಡು ಹೇಳುತ್ತಾ ಪ್ರವೇಶಿಸುವರು. ಎಲ್ಲರ ಟೊಂಕಗಳಿಗೆ ಬೇವಿನ ತೊಪ್ಪಲು, ಕೈಯಲ್ಲಿ ಬೇವಿನ ಟೊಂಗೆಗಳಿರುತ್ತವೆ. ಇದರಲ್ಲಿ ಹನುಮಪ್ಪನ ಕೈಯಲ್ಲಿ ಕುರಿಯ ಮರಿ ಇರುತ್ತದೆ. ನರಸಪ್ಪನ ಕೈಯಲ್ಲಿ ಕೋಳಿ ಇರುತ್ತದೆ. ರಾಮಪ್ಪ ಮತ್ತಿಬ್ಬರು ತಮ್ಮಟೆ ಬಾರಿಸುತ್ತಿರುತ್ತಾರೆ.)

ನಮ್ಮಮ್ಮ ಮಾಂಕಾಳ್ಯಮ್ಮ – ನಮ್ಮಮ್ಮ ಮಾಂಕಾಳ್ಯಮ್ಮ ।
ನಮ್ಮಮ್ಮ ಮಾರೆಮ್ಮ – ನಮ್ಮಮ್ಮ ಈರಮ್ಮ. ।
ನಮ್ಮಮ್ಮ ಗಂಗಮ್ಮ – ನಮ್ಮಮ್ಮ ಸುಂಕ್ಲಮ್ಮ ॥

ನಿನ್ನನ್ನೆ ನೋಡೇವು – ನಿನ್ನನ್ನೆ ಹಾಡ್ಯೇವು
ನಿನ್ನನ್ನೆ ಪೂಜಿಸೇವು – ನೀನೇ ನಮ್ಮಮ್ಮ ಕಾಪಾಡಮ್ಮ
ಓಯಮ್ಮ ತಾಯಮ್ಮ ನಮ್ಮಮ್ಮ ಮಾರೆಮ್ಮ ॥ 1 ॥

ಬಾರವ್ವ ಬಾರವ್ವ ನಮ್ಮನ್ನ ಕಾಯಾಕ
ತೋರವ್ವ ತೋರವ್ವ ನಿನ್ದಯ ನಮ್ಯಾಕ
ನೀನೇ ನಮ್ದೇವ್ರು ನಿನ್ಮುಂದೆ ಕುಣಿದೇವು ॥ 2 ॥

ಹೊಯ್ಯಾ......ಹುಯ್ಯೊ......ಹಾಕಲೇಹಾಕ್ ಅಹೋಯ್
ಆಹೋಯ್ ...ಹೊಯ್...ಹೊಯ್ ...ಹೊಯ್...ಹೊಯ್

(ಇಷ್ಟರಲ್ಲಿ ನರಸಪ್ಪ ಎಂಬಾತ ದಾಸರನ್ನ ನೋಡಿ ಗಾಬರಿಯಿಂದ ಗಲಾಟೆ ನಿಲ್ಲಿಸುವನು. )

ನರಸಪ್ಪ – ಲೇಯ್ ಸಾಕು ಮಾಡ್ರಲೇ, ಸಾಕು ಮಾಡ್ರಿ. ದಾಸಪ್ಪನೋರು ! ದಾಸಪ್ಪನೋರು !! ನಮಸ್ಕಾರ್ರೀಯಪ್ಪ, ನಮಸ್ಕಾರ.

ಎಲ್ಲರು – ನಮಸ್ಕಾರ್ರೀಯಪ್ಪ, ನಮಸ್ಕಾರ, ನಮಸ್ಕಾರ.

(ದಾಸರು ಮುಂದೆ ಬರುವರು. ಎಲ್ಲರು ವಿನಮ್ರರಾಗಿ ಕೈಜೋಡಿಸಿ ಕೊಂಡು ಹಿಂದು ಹಿಂದೆ ಸರಿಯುವರು.)

ದಾಸರು – ಓ ... ನರಸಪ್ಪನಾ ! ನಾನು ಯಾರೋ ಎಂದು ತಿಳಿದಿದ್ದೆ ! ಏನು ಬಂಧು ಮಿತ್ರರೊಡನೆ ಸೇರಿ ಆನಂದದಿಂದ ಎಲ್ಲಿಗೋ ಹೊರಟಿದ್ದೀಯಲ್ಲ ? ಏನಾದರೂ ಹಬ್ಬವೇ ?

ನರಸಪ್ಪ – ಓದ್ಯಪ್ಪ ದ್ಯಾವರು ಮಾಡ್ತೀವ್ಯಪ್ಪ.

ದಾಸರು – ದೇವರಾ ! ಯಾವ ದೇವರು ನರಸಪ್ಪ ?

ನರಸಪ್ಪ – ಇನ್ಯಾವ ದ್ಯಾವರಪ್ಪ; ಊರದ್ಯಾವರ ಮಾಡ್ತೀವಿ.

ದಾಸರು – ಊರದೇವರ ಮಾಡ್ತೀರಾ !

( ಎಂದು ಹೇಳಿ ಸ್ವಲ್ಪ ಮುಂದೆ ಬಂದು, ನರಸಪ್ಪನ ಕೈಯಲ್ಲಿ ರುವ ಕೋಳಿಯನ್ನು ಮುಟ್ಟುವರು. ನರಸಪ್ಪ ಸಂಕೋಚವನ್ನು ಅಭಿನಯಿಸುತ್ತಾ.)

ನರಸಪ್ಪ – ಯಪ್ಪಾ ! ಯಪ್ಪಾ ! ಯಪ್ಪಾ ! !

ದಾಸರು – ಏನು ನರಸಪ್ಪ ?

ನರಸಪ್ಪ – ನೀನು ಮುಟ್ಟಬ್ಯಾಡಪ್ಪ.

ದಾಸರು – ತಪ್ಪು ನರಸಪ್ಪ; ಸ್ವಾಮಿ ಶ್ರೀಹರಿ ಎಲ್ಲೆಲ್ಲೂ ಇದ್ದಾನೆ. ಸಮಯ ಬಂದಾಗ ಯಾವುದನ್ನು ಮುಟ್ಟಿದರೂ ತಪ್ಪಾಗಲಾರದು. ನನ್ನ ಶ್ರೀಹರಿ ಈ ಕೋಳಿಯಲ್ಲಿ ಇಲ್ಲಾ ಎಂದು ತಿಳಿದಿದ್ದೀಯಾ ? ಆ, ಅದಿರಲಿ, ಈ ಕೋಳಿ! ಈ ಮೇಕೆ! ಆ ಕೋಣ ! ಈ ಪ್ರಾಣಿ ಗಳನ್ನೆಲ್ಲಾ ಎಲ್ಲಿಗೆ ಒಯ್ಯುತ್ತಾ ಇದ್ದೀರಿ ?

ನರಸಪ್ಪ – ( ಸಂಕೋಚವನ್ನು ಅಭಿನಯಿಸುತ್ತಾ ) ಯಪ್ಪಾ...ಯಪ್ಪಾ .. ಊ – ಊ ನಿಮ್ಮಂದೆ ಯಾಂಗ್ಯಪ್ಪ ಏಳೋದು ?

ದಾಸರು – ಸಂಕೋಚಪಡಬೇಡ ; ಧೈರ್ಯವಾಗಿ ಹೇಳು.

ನರಸಪ್ಪ – ದ್ಯಾವರಿಗೆ ... ...

ದಾಸರು – ಉಂ ... ದೇವರಿಗೆ ?

ನರಸಪ್ಪ – ಬಲಿಕೊಡಾಕಪ್ಪ.

ದಾಸರು – ಬಲಿಕೊಟ್ಟರೆ ಏನಾಗುತ್ತದೆ ?

ನರಸಪ್ಪ – ಆ ದ್ಯಾವರು ನಮ್ಮ ಕಾಪಾಡ್ತಾಳ್ಯಪ್ಪ

ದಾಸರು – ನರಸಪ್ಪ, ನಾನು ಒಂದು ಮಾತು ಹೇಳಲಾ, ಕೇಳುತ್ತೀಯಾ?

ನರಸಪ್ಪ – ಏಳ್ತಂದೆ, ಏಳು; ಕೇಳ್ತೀವು.

ಹನುಮಪ್ಪ – ಈ ಊರಿಗೇನೇ ನೀನು ದ್ಯಾವರಪ್ಪ ! ಏಳ್ಸಾಮಿ, ಕೇಳ್ತೀವು.

ರಾಮಪ್ಪ – ಯಪ್ಪಾ, ನಿನ್ನ ಯಾದಿಂದಲೇ ನಾವೂ ಒಂದು ಮಾಡಿನ್ಯೋರಾ ದೈಲ್ಲಪ್ಪ! ಏಳ್ಳಪ್ಪ, ಏಳು.

ದಾಸರು – ಸಂತೋಷ; ನೋಡು ನರಸಪ್ಪ, ದೂರದಲ್ಲಿರುವ ಆ ಊರ ದೇವರ ಮಾಡಿ, ಆ ಕೋಣಾನ್ನ, ಈ ಕೋಳಿನ್ನ, ಈ ಕುರೀನ್ನ ಬಲಿ ಕೊಡೋ ಮುಂಚೆ, ನೀವು ಬೇರೆ ಒಂದು ಊರದೇವರನ್ನು ಮಾಡಿ, ಬೇರೆ ಒಂದು ಕೋಣಾನ್ನ, ಕೋಳಿನ್ನ, ಎಷ್ಟೋ ಕುರಿಗಳನ್ನ ಬಲಿಕೊಡಬೇಕು. ನಿಜವಾದ ಊರದೇವರನ್ನು ಮರೆತಿದ್ದೀರಿ.

ನರಸಪ್ಪ – (ಆಶ್ಚರ್ಯ ಸಂದೇಹಗಳನ್ನು ವ್ಯಕ್ತಪಡಿಸುತ್ತಾ) ಅದೇನು ದಾಸಪ್ಪ ನೋರೇ!! ಇದೇ ಅಪ್ಪ, ನಮ್ಮೂರ ದ್ಯಾವರು! ಮಾಡ್ತಾನೇ ಐದೀವಲ್ಲಪ್ಪ!

ಹನುಮಪ್ಪ – ಅಲ್ಲಾ ದಾಸಪ್ಪನೋರೇ, ಇನ್ನೊಂದು ಊರದ್ಯಾವರಾ? ಯಾವುದ್ಯಪ್ಪ ಅದು?

ದಾಸರು – ಇದೆ ಹನುಮಪ್ಪ. ನಿಜವಾದ ಊರದೇವರು ಬೇರೆ ಇದ್ದಾನೆ. ನಿನ್ನ ಹತ್ತಿರದಲ್ಲೇ ಇದ್ದಾನೆ. ಅದರೆ ನೀನು ಆ ದೇವರ ಕಡೆ ಲಕ್ಷ್ಯವನ್ನೇ ಕೊಡುತ್ತಾ ಇಲ್ಲ. ಆ ನಿನ್ನ ನಿಜದೇವರನ್ನು ಕುರಿತು ಆಲೋಚನೆಯನ್ನೇ ಮಾಡುತ್ತಾ ಇಲ್ಲ.

ಹನುಮಪ್ಪ – ದಾಸಪ್ಪನೋರೇ, ನೀವು ಏಳ್ತಾ ಇರೋದೇ ತಿಳೀದಾಂಗೈತೆ!

ನರಸಪ್ಪ – ದಡ್ಡ ಜನಾಪ್ಪ ನಾವು; ತಿಳ್ಯಾಂಗ ಏಳ್ತಂಡೆ; ತಪ್ಪಿದ್ರೆ ತಿದ್ಕೋತೀವಿ.

ದಾಸರು – ಅ, ... ಹಾಗಾ!

(ಹಾಡುವರು)

ಊರದೇವರ ಮಾಡಬೇಕಣ್ಣ ತನ್ನೊಳಗೆ ತಾನೇ
ಊರದೇವರ ಮಾಡಬೇಕಣ್ಣ ।

ಊರದೇವರ ಮಾಡಿರೆಂದು ಸಾರುತಿದೆ ಶ್ರುತಿ ಇರಳು ಹಗಲು ।
ದ್ವಾರಗಳೊಂಭತ್ತು ಮುಚ್ಚಿ ನಿಲ್ಲಿಸಿ ಭ್ರೂಮಧ್ಯದಲ್ಲಿ ॥

ನರಸಪ್ಪಾ, ಈ ನಮ್ಮ ದೇಹಗಳೇ ಪವಿತ್ರ ಗ್ರಾಮಗಳು. ಈ ಊರುಗಳಲ್ಲಿ ರಾಜಮಾರ್ಗಗಳಿವೆ, ರಾಜಮಂದಿರಗಳಿವೆ, ಕಾವಲುಗಾರರಿದ್ದಾರೆ, ಸಮಸ್ತ ವಿಧವಾದ ಸೌಕರ್ಯಗಳೂ

ಇವೆ. ಈ ಗ್ರಾಮಗಳಿಗೆ ಅಧಿಪತಿಯಾಗಿ, ಹೃದಯ ಮಧ್ಯದಲ್ಲಿ ಶ್ರೀಹರಿ ಕೂತಿದ್ದಾನೆ! ಆತನೇ ನಿಜವಾದ ಊರದೇವರು! ಆ ಪ್ರಭು ನಮ್ಮನ್ನು ರಕ್ಷಿಸಲಿಕ್ಕೆ ಇಂಥಾ ಬಲಿಯನ್ನು ಎಂದೂ ಕೇಳುವುದಿಲ್ಲ. ಈ ನಿನ್ನ ಊರದೇವರನ್ನು ಬಿಟ್ಟು, ಎಲ್ಲೋ ಇರುವ ದೇವರಲ್ಲದ ದೇವರಿಗಾಗಿ ಹೋಗುವುದು, ಗಂಗೆಯ ದಂಡೆಯಲ್ಲಿದ್ದು ನೀರಿಗಾಗಿ ಭಾವಿ ತೋಡಿದಂತಾಗುವುದು. ಕಾಮಧೇನುವಿರಲು ನೀರುಮಜ್ಜಿಗೆಗಾಗಿ ಪರರ ಮನೆಗಳಿಗೆ ಅಲೆದಂತಾಗುವುದು. ರಾಜನ ಮಗನೆನಿಸಿ, ಕರದೀಪದ ಎಣ್ಣೆಗೆ ತಿರುಪೆ ಬೇಡಿದಂತಾಗುವುದು. ಆಲೋಚಿಸಿರಿ; ಒಮ್ಮೆ ಆಲೋಚಿಸಿರಿ.

ನರಸಪ್ಪ – ದಾಸಪ್ಪನೋರೇ! ನನ್ನ ಮೈನೇ ಒಂದು ಊರಾ! ಇದರಾಗ ದೇವರೈದಾನಾ? ಈ ನನ್ನ ಊರದೇವರ್ನ ಬಿಟ್ಟೈದೀನಾ? ಏನ್ಯಪ್ಪಾ ಇದು!!

ದಾಸರು – ಇವತ್ತೊಂದೇ ಅಲ್ಲ ನರಸಪ್ಪ!

" ಎಷ್ಟೊಯುಗಗಳು ತೀರಿಹೋಯ್ತಣ್ಣ ದೇವರ ಮಾಡದೆ
ಕಷ್ಟದಿಂದ ನೊಂದೆ ಕಾಣಣ್ಣ।

ಅಷ್ಟದಳದಾ ಕಂಬ ನಿಲ್ಲಿಸಿ ಇಟ್ಟೆ ಚಕ್ರಂಗಳನು ಹಾಕಿ।
ಸೃಷ್ಟಿ ದೇವರ ತಂದು ನಿಲ್ಲಿಸಿ ದುಷ್ಟಕೋಣನ
ಶಿರವ ತರಿದು ॥ಊರ॥ "

ಈಗಲೇ ನಿಮಗೆ ಈ ಜನ್ಮ ಬಂದಿದೆ ಎಂದು ತಿಳಿಯ ಬೇಡಿರಿ. ಇಂಥಾ ಜನ್ಮಗಳು ಎಷ್ಟೋ ಆಗಿ ಹೋಗಿವೆ. ಅದುದಕ್ಕೆ ಚಿಂತಿಸ ಬೇಡಿರಿ. ಸಮಯ ಬಂದಿದೆ; ದೇವರು ಕೃಪೆಯಿಂದ ನಿಮ್ಮ ಉದ್ಧಾರಕ್ಕಾಗಿ ಈ ಮಾನವ ಜನ್ಮವನ್ನು ಮತ್ತೊ ನಿಮಗೆ ಕರುಣಿಸಿದ್ದಾನೆ. ಗಾಳಿ ಬಂದಾಗ ತೂರಿಕೊಳ್ಳುವಂತೆ, ಈಗ ನಿಮ್ಮ ಜನ್ಮಗಳನ್ನು ಸಾರ್ಥಕಗೊಳಿಸಿಕೊಳ್ಳಿ. ಪವಿತ್ರವಾಗಿ ಇಟ್ಟುಕೊಳ್ಳಬೇಕಾದ ಈ ಶರೀರಗಳಲ್ಲಿ, ಮಹಾಕ್ರೂರ ಸ್ವಭಾವಗಳುಳ್ಳ ಕೋಣಗಳನ್ನು ಪೋಷಿಸುತ್ತಿದ್ದೇವೆ. ಈ ಊರದೇವರಿಗೆ ಆ ಕೋಣಗಳನ್ನು ಬಲಿಕೊಡಬೇಕು.

ನರಸಪ್ಪ – ನಮ್ಮಾತ ಕೋಣಾನ್ನ ಜೆಳಸ್ತಾ ಇದೀವಾ? ಯಪ್ಪಾ...!

ದಾಸರು – ಹೌದು, ನನ್ನದು, ನನ್ನದು ಎಂಬ ಸ್ವಾರ್ಥವಿದೆಯಲ್ಲ, ಅದೇ ಒಂದು ದುಷ್ಟಕೋಣ. ಈ ನಿನ್ನ ಸ್ವಾರ್ಥವೆಂಬ ಕೋಣವನ್ನು ನಿನ್ನ ಈ ಊರದೇವರಿಗೆ ಬಲಿಕೊಡು. ಜನ್ಮಸಾರ್ಥಕ ವಾಗುತ್ತದೆ. ಎಲ್ಲರಿಗೂ ಒಳ್ಳೆಯದಾಗುತ್ತದೆ.

ನರಸಪ್ಪ – ಯೆಂತಾ ಒಳ್ಳೇ ಮಾತ್ಯೆಪ್ಪ! ಉದ್ಧಾರಾದೆ ನನ್ತಂದೆ! ಉದ್ಧಾರಾದೆ! ದಾಸಪ್ಪನೋರೆ, ನೀನು ಏಳ್ದ ಆ ಕೋಣಾನ್ನ ನನ್ದೇವರ್ಗೆ ಬಲಿಕೊಡ್ತೀನಪ್ಪ, ಬಲಿಕೊಡ್ತೀನಿ.

(ದಾಸರು ಹನುಮಪ್ಪನ ಹತ್ತಿರ ಬಂದು)

ದಾಸರು – ಹನುಮಪ್ಪ, ಈ ಕುರಿ ಸಾಧುಪ್ರಾಣಿ; ಒಂದೂ ಅರಿಯದ ಮಂದಮತಿ; ನೀನು ಹುಲ್ಲು ಹಾಕದೇ ಇದ್ದರೂ ತಾನೇ ತಿಂದು ಬಂದು ಹಾಲನ್ನುಣಿಸುವುದು. ಇಂಥಾ ಅಮಾಯಕ ಪ್ರಾಣಿಯನ್ನು ಈ ದಿನ ಬಲಿಕೊಡಲು ತೆಗೆದುಕೊಂಡು ಹೋಗುತ್ತಾ ಇದ್ದಿ. ಆದರೆ ಇದಕ್ಕಿಂತಲೂ ವಿರುದ್ಧ ಸ್ವಭಾವಗಳುಳ್ಳ, ನಿನ್ನ ನಾಶಕ್ಕಾಗಿಯೇ ಹಾತೊರೆಯುತ್ತಿರುವ ಒಂದಲ್ಲ ಒಂಭತ್ತು ಕುರಿಗಳನ್ನು ಮಹಾಮೋಹದಿಂದ ನಿನ್ನ ದೇಹದಲ್ಲಿ ಬೆಳೆಸುತ್ತಿರುವೆ. ಇದು ಹಾವಿಗೆ ಹಾಲೆರೆದಂತೆ ಹನುಮಪ್ಪಾ!

ಹನಮಪ್ಪ – ದಾಸಪ್ಪನೋರೆ! ...

ದಾಸರು – ನೀನು ಬಲಿಕೊಡಬೇಕಾದುದು ಈ ಕುರಿಯನ್ನಲ್ಲ, ನಿನ್ನ ಮುಂದಿನ ಗತಿಗೆ ಮಾರ್ಗ ಕಾಣದಂತೆ ಮಾಡುತ್ತಿರುವ ನಿನ್ನಲ್ಲಿರುವ ಆ ಒಂಭತ್ತು ಕುರಿಗಳನ್ನು.

ಹನುಮಪ್ಪ – ದಾಸಪ್ಪನೋರೇ, ನನ್ತಾಕ ಅಂಥಾ ಒಂಭತ್ತು ಕುರಿಗಳೈದಾವಾ! ಅವು ನನ್ನನೇ ಕೊಲ್ತಾವಾ! ಯಾವಪ್ಪಾ ಅವು?

ದಾಸರು – "ಕಷ್ಟಕರ್ತಾನೆಂಬ ಕುರಿಯಣ್ಣ, ಅದನು ತಂದೂ।
ಕಟ್ಟಿ ತಲೆಯನು ಹೊಡೆಯ ಬೇಕಣ್ಣ।

ಅಷ್ಟಮದದಾ ಕುರಿಗಳನ್ನು ಕಟ್ಟಿ ತಲೆಯನು ಚೆಂಡನಾಡಿ।
ಅಟ್ಟಿ ತಿರುಗುವ ಕೋಳಿಯನ್ನು ಕುಟ್ಟಿ ಸೂರೇ ಹಾಕುತಲ್ಲಿ
॥ ಊರದೇವರ ಮಾಡ ॥"

ನಾನು ನೋಡಿದೆ, ನಾನು ಕೊಟ್ಟೆ, ನಾನು ಮಾಡಿದೆ, ನಾನು, ನಾನು, ನಾನು ಎಂಬುದೇ ಒಂದು ಭಯಂಕರವಾದ ಕುರಿ;

ಅದನ್ನು ಬಲಿಕೊಡಬೇಕಾಗಲಿ, ಇದನಲ್ಲ. ಹನುಮಪ್ಪ ಒಂದು ಮಾತು. ನೀನು ಜಾಲೀಗಿಡದ ಬೀಜವನ್ನು ಬಿತ್ತಿದಲ್ಲಿ ಏನು ಬೆಳೆಯುತ್ತದೆ?

ಹನುಮಪ್ಪ – ಜಾಲೀಗಿಡಾನೆ ಆಗ್ತೈತಪ್ಪ.

ದಾಸರು – ಆ, ... ಬಾಳೆಗಿಡವೋ, ಮಾವಿನಗಿಡವೋ, ಆಗುವುದಿಲ್ಲ ವಷ್ಟೆ!

ಹನುಮಪ್ಪ – ಅಧ್ಯಾಂಗಾಗ್ತೈತಪ್ಪ, ಯಾಬೀಜಾ ಆಕಿದ್ರೆ ಆಗಿಡಾ ಆಗ್ತೈತೆ. ಬೇರೇಗಿಡಾ ಯಾಂಗಾಗ್ತೈತಪ್ಪ!

ದಾಸರು – ಹೌದಾ! ಈ ನಿಮ್ಮ ಹಿಂಸಾತ್ಮಕವಾದ ಕಾರ್ಯದಿಂದ ಸುಖ ಶಾಂತಿಗಳು ಮಾತ್ರ ಹೇಗೆ ದೊರೆಯುತ್ತವೆ? ಎಂದಿಗೂ ದೊರೆಯಲಾರವು. ನೀವು ಮಾಡಿದ ಹಿಂಸೆಗೆ ಹಿಂಸೆಯೇ ಪ್ರತಿಫಲ ವಾಗುವುದು.

ಹನುಮಪ್ಪ – ಸತ್ಯ ನಮ್ಮಪ್ಪ, ನೀನಂದ್ಯಾತು ಸತ್ಯ.

ದಾಸರು – ನಮ್ಮಲ್ಲಿರುವ ದುರ್ಗುಣಗಳನ್ನು ದೂರಮಾಡಿಕೊಳ್ಳಬೇಕು. ಇಷ್ಟು ಮಾತ್ರವಲ್ಲ ಅನ್ನಮದ, ದುಡ್ಡಿನಮದ, ವೈಭವದಮದ, ವಯಸ್ಸಿನ ಮದ, ರೂಪದ ಮದ, ಬಲದ ಮದ, ಎಲ್ಲವೂ ನನಗೆ ವಶವಾಗಿದೆ ಎಂಬ ಮದ, ನನಗಾರೂ ಸರಿ ಇಲ್ಲವೆಂಬ ಮದ. ಇವೇ ನಿನ್ನ ಅಜ್ಞಾನಕ್ಕೆ ಪ್ರತಿರೂಪಗಳಾದ ಎಂಟು ಕುರಿಗಳು. ಈ ಕುರಿಗಳನ್ನು ಸಹ ನಿನ್ನ ದೇವರಿಗೆ ಬಲಿಕೊಡು. ನಿನ್ನ ಜನ್ಮವೇ ಧನ್ಯ ವೆನಿಸುವುದು.

(ಹನುಮಪ್ಪ ಆನಂದವನ್ನು ಅಭಿನಯಿಸುತ್ತಾ ತನಗರಿಯದ ಹಾಗೆ ಕೈಯ್ಯಲ್ಲಿರುವ ಕುರಿಯನ್ನು ಬಿಟ್ಟು ಬಿಡುವನು.)

ಹನುಮಪ್ಪ – ನನ್ನೊಡೆ, ನಮ್ಮಪ್ಪ ತಿಳಿಸಿ ಕೊಟ್ಯೆಪ್ಪ. ಅರಿವಿಲ್ಲದೆ ಎಷ್ಟು ತಪ್ಪಾದ ದಾರ್‍ಯಾಗಾ ಹೋಗ್ತಾ ಇದ್ವಿ! ಕರುಣಾಮಾಡ್ಬೇಕು ತಂಡೆ, ಕರುಣಾಮಾಡ್ರಿ.

(ದಾಸರು ರಾಮಣ್ಣನ ಕಡೆನೋಡುವರು)

ದಾಸರು – ರಾಮಣ್ಣಾ ...

ರಾಮಣ್ಣ – ನನ್ನೊಡೆ, ತಿಳಿತ್ಯೆಪ್ಪ, ತಿಳೀತು.

"ಅಟ್ಟಿ ತಿರುಗುವ ಕೋಳಿಯನ್ನು ಕುಟ್ಟಿ ಸೂರೇ ಆಕುತಲ್ಲಿ
॥ ಊರದೇವರ ಮಾಡಬೇಕೆಪ್ಪ ॥"

ನನಸ್ತಾಕ ಕಾಮ ಅಂಬೊ ದೊಡ್ಡ ಕೋಳಿ ಐತ್ರೆಪ್ಪ.
ನಿನ್ನ ದಯಾ ಬಲಾ ಇದ್ರೆ, ಅದನ್ನಾಕಡಿದಾಕ್ಬಿಡ್ತೀನಿ ಯಪ್ಪಾ.

ದಾಸರು – ಭಲಾ ರಾಮಣ್ಣಾ, ಭಲಾ. ಎಷ್ಟು ಚೆನ್ನಾಗಿ ತಿಳಕೊಂಡೆ! ನನ್ನ ಉಪದೇಶ ಹರಿ ಪ್ರೀತಿಯಾಯ್ತು.

ನರಸಪ್ಪ – ಶರಣು ತಂದೆ ಶರಣು. ಎಷ್ಟು ಪ್ರೇಮಪ್ಪ ನಮ್ಮಾಲೆ ನಿನಗೆ!

ದಾಸರು – ನರಸಪ್ಪ, ನನ್ನ ಪ್ರೇಮಕ್ಕಿಂತಲೂ ಆ ಶ್ರೀಹರಿಯ ಪ್ರೇಮ ಅನಂತ ಪಾಲು ಹೆಚ್ಚಾದುದು; ಅಸದೃಶವಾದುದು, ಅವ್ಯಾಜವಾದುದು ಆ ಪ್ರೇಮಸ್ವರೂಪಿಯಾದ ದೇವದೇವನ ಪೂಜೆಯನ್ನು ಇಂದಿನಿಂದಲೇ ಮಾಡಿರಿ.

ನರಸಪ್ಪ – ದಾಸಪ್ಪನೋರೇ, ಆದರೇ ಆ ಪೂಜಾ ಗೀಜಾ ನಮಗ್ಯಾಗಪ್ಪ ತಿಳೀಬೇಕು? ಮೊರಟು ಜನಾನಪ್ಪ ನಾವು.

ದಾಸರು – ಹಾಗೆ ತಿಳಿಯಬೇಡ; ಆ ದೇವದೇವನನ್ನು ಪೂಜಿಸಲಿಕ್ಕೆ ಏನೂ ಬೇಕಾಗಿಲ್ಲ. ಸದ್ಭಾವನೆಂಬ ನೀರಿನಿಂದ ತೊಳೆದು, ಪ್ರೇಮವೆಂಬ ಗಂಧವನ್ನು ಹಚ್ಚಿ, ಆಪ್ಯಾಯತೆ, ಅನುರಾಗ, ಆದರಣಗಳೆಂಬ ಹೂವುಗಳಿಂದ ಅರ್ಚಿಸಿ, ಒಂದೇ ಒಂದು ನಮಸ್ಕಾರದಿಂದ ಸತ್ಕರಿಸಿದರೆ ಸಾಕು; ಆ ಸ್ವಾಮಿ ಪ್ರೀತನಾಗುತ್ತಾನೆ.

ಕಾರಣ, ಈ ಪೂಜೆಯನ್ನು ಇಂದಿನಿಂದಲೇ ಮಾಡಿರಿ. ನಾಳೆ ನೋಡೋಣ ಎನ್ನ ಬೇಡಿರಿ. ನಾಳಿನದಿನ ನಿಮ್ಮದಲ್ಲ. ಬಾಳು ಅಸ್ಥಿರ, ಮುಂದೆ ಇಂತಹ ಜನ್ಮ ಬರುವುದೋ ಬಾರದೋ!

"ಮುಂದೆ ಇಂಥಾ ಜನ್ಮ ಬರದಣ್ಣಾ, ನೋಡಣ್ಣಾ ನೀನು
ಮಂದ ಮತಿಯು ಬೇಡ ಕಾಣಣ್ಣಾ ।

ಹಿಂದಿನಾ ಕಷ್ಟವ ಮರೆದು ಮುಂದಿನಾ ಹಮ್ಮನ್ನು ತೊರೆದು ।
ತಂದೆ ಪುರಂದರ ವಿಠಲನ್ನ ಹೊಂದಲೂ ನೀ ಮುಕ್ತನಣ್ಣಾ ॥
॥ ಊರದೇವರ ಮಾಡಬೇಕಣ್ಣಾ ॥ "

ಸೃಷ್ಟಿ ಕರ್ತನಾದ ಶ್ರೀಹರಿ ಕರುಣಿಸಿ ಕೊಟ್ಟ, ಈ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಿ.

ಹನುಮಪ್ಪ – ಸ್ವಾಮೀ, ದಾಸಪ್ಪನೋರೇ –

ದಾಸರು – ಏನು ಹನುಮಪ್ಪ? ಹೇಳು; ಸಂಕೋಚಪಡಬೇಡ.

ಹನುಮಪ್ಪ – ಯಪ್ಪಾ, ಈಸ್ಟಿನಾ ತಿಳದೇ ಏಸ್ತಪ್ಪು ಮಾಡೀವ್ಯಲ್ಲಪ್ಪ! ಆವನ್ನಾ ್ಯಂಗಪ್ಪ ಕಳಕಂಬೋದು ?

ದಾಸರು – ಹನುಮಯ್ಯ, ಪಶ್ಚಾತ್ತಾಪದ ಮನಸ್ಸಿನಿಂದ ತಪ್ಪನ್ನು ಒಪ್ಪಿಕೊಂಡರೆ, ನಮ್ಮಪ್ಪ ಶ್ರೀಹರಿ ಒಪ್ಪಿಸಿಕೊಂಡು ಕಾಯುತ್ತಾನೆ. ಆತನು ಕ್ಷಮಾಸಮುದ್ರ; ಪರಮ ಕರುಣಾಳು. ತಾಯಿ ಮಗುವಿನ ತಪ್ಪನ್ನು ಎಣಿಸುವಳೇ ? ನರಸಪ್ಪ, ಆದದ್ದಾಯಿತು. ಹಿಂದಿನದನ್ನು ಆ ದಯಾಮಯನಿಗೆ ಒಪ್ಪಿಸಿಬಿಡಿರಿ. ಮುಂದಿನ ನಿಮ್ಮ ಪ್ರತಿ ಹೆಜ್ಜೆ ಪವಿತ್ರವಾಗಿರಲಿ. ಲೋಕಕ್ಕೆ ಆದರ್ಶಪ್ರಾಯರಾಗಿ ಬಾಳಿರಿ.

ನರಸಪ್ಪ – ಸಾಕು ನನ್ತಂದೆ ಸಾಕು; ಧೈರ್ಯ ತಂದುಕೊಟ್ಟ್ರಿ, ಚಲೋ ದಾರಿ ತೋರಿಸಿದ್ರಿ. ನಿನ್ನಂಥೋರಿಂದಾನೇ ಲೋಕ ಉದ್ಧಾರಾಗ್ತೈತಪ್ಪ!

ದಾಸರು – ಎಲ್ಲರನ್ನು ಕಾಪಾಡಿ ಉದ್ಧರಿಸುವವನು ಆ ಶ್ರೀಹರಿ ಒಬ್ಬನೇ. ಪವಿತ್ರವಾದ ಮನಸ್ಸಿನಿಂದ ಕೂತಾಗ, ನಿಂತಾಗ, ಮಲಗಿದಾಗ ಏಳುವಾಗ, ಮಕ್ಕಳಾಡಿಸುವಾಗ, ನಿಮ್ಮ ಹೆಂಡಂದಿರೊಡನೆ ಸುಖಿಸುವಾಗ, ದಾರಿನಡೆಯುವಾಗ, ಹೊಲದ ಕೆಲಸ ಮಾಡುವಾಗ, ಎಲ್ಲಾಸಮಯದಲ್ಲೂ ಆ ಶ್ರೀಹರಿಯ ನಾಮವನ್ನು ನೆನೆಯಿರಿ. ಹರಿನಾಮಕ್ಕಿರುವ ಪ್ರಾಶಸ್ತ್ಯ ಅಮೋಘವಾದುದು. ಅದರಲ್ಲೂ ಕಲಿಕಾಲದಲ್ಲಿ !

(ಹಾಡುವರು)

ಕಲಿಯುಗದಲಿ ಹರಿನಾಮವ ನೆನೆದರೆ
ಕುಲಕೋಟಿಗಳು ಉದ್ಧರಿಸುವವೋ ರಂಗ ॥ ಪಲ್ಲ ॥

ಸುಲಭ ಮುಕುತಿಗೆ ಸುಲಭವೆಂದೆನಿಸುವ ।
ಜಲರುಹನಾಭನ ನೆನೆ ಮನವೆ ॥ ಅ. ಪ ॥

ಸ್ನಾನವನರಿಯೆನು ಮೌನವನರಿಯೆನು
ಧ್ಯಾನವ ನರಿಯೆನೆಂದೆನಬೇಡಾ ॥
ಜಾನಕೀವಲ್ಲಭ ದಶರಥನಂದನ
ಗಾನವಿನೋದನ ನೆನೆ ಮನವೇ ॥ 1 ॥

ಅರ್ಚಿಸಲರಿಯೆನು ಮೆಚ್ಚಿಸಲರಿಯೆನು ।
ತುಚ್ಛನು ನಾನೆಂದೆನಬೇಡ
ಅಚ್ಯುತಾನಂತ ಗೋವಿಂದ ಮುಕುಂದನ
ಇಚ್ಛೆಯಿಂದ ನೀ ನೆನೆ ಮನವೇ ॥ 2 ॥

ಜಪವೊಂದರಿಯೆನು ತಪವೊಂದರಿಯೆನು ।
ಉಪದೇಶವಿಲ್ಲೆಂದೆನಬೇಡ ।
ಅಪಾರ ಮಹಿಮ ಶ್ರೀಪುರಂದರ ವಿಠಲನ
ಉಪಾಯದಿಂದಲಿ ನೆನೆ ಮನವೇ ” ॥ 3 ॥

ಅರ್ಥವಾಯಿತೇ, ಇದೇ ಮಾರ್ಗವನ್ನನುಸರಿಸಿರಿ. ನಿಮ್ಮ ನಿಮ್ಮ ಜನ್ಮವನ್ನು ಸಾರ್ಥಕ ಗೊಳಿಸಿಕೊಳ್ಳಿ.

ನರಸಪ್ಪ – ಸಾಕು ತಂದೆ, ಸಾಕು. ಇನ್ನು ಆ ನಾರಾಯಣನ ನಾಮವೇ ತಾರಕಮಂತ್ರ. ನೀನೇ ನಮ್ಮ ಪಾಲಿನ ಗುರು. ಬರ್ತೀವ್ರಪ್ಪಾ, ಬರ್ತೀವಿ.

(ಹನುಮಪ್ಪ, ರಾಮಣ್ಣ, ಎಲ್ಲರು) ಬರ್ತೀವಿ ನನ್ತಂದೇ, ಬರ್ತೀವಿ, ನಮಸ್ಕಾರ, ನಮಸ್ಕಾರ, ನಮಸ್ಕಾರ.

(ಎಂದು ಹೇಳುತ್ತಾ ನಮಸ್ಕಾರ ಮಾಡಿ ಎಲ್ಲರೂ ಹೊರಟು ಹೋಗುವರು. ಎಲ್ಲರು ಹೋದಮೇಲೆ)

ದಾಸರು – ಕೃಷ್ಣಾ, ಇಂದು ಜನ್ಮ ಸಾರ್ಥಕವಾಯಿತು. ಸುಜೀವಿಗಳ—ನ್ನುದ್ಧರಿಸುವ ಭಾಗ್ಯ ಕರುಣಿಸಿದೆ. ಈ ಎಲ್ಲವನ್ನೂ ನಿನ್ನಡಿದಾವರೆಗಳಲ್ಲಿ ಅರ್ಪಿಸಿದ್ದೇನೆ; ಕೃಷ್ಣಾರ್ಪಣಮಸ್ತು.
(ಇದೇ ಸಮಯಕ್ಕೆ ದಾಸರ ಮಗ ವರದ, ದಾಸರ ಹತ್ತಿರಕ್ಕೆ ಬಂದು)

ವರದ – ಅಪ್ಪಾ —

ದಾಸರು – ಏನು ವರದಾ ?

ವರದ – ಪ್ರಯಾಣಕ್ಕೆ ಎಲ್ಲಾ ಸಿದ್ಧತೆಗಳಾಗಿವೆ. ಬಹಳ ಹೊತ್ತಾಯಿತು. ಅಮ್ಮ, ನಿಮ್ಮನ್ನು ನೋಡಿಬಾ ಎಂದು ಕಳುಹಿಸಿದಳು.

ದಾಸರು – ಓ! ಹೌದು; ಮರೆತೇ ಬಿಟ್ಟಿದ್ದೆ. ಈದಿನ ತಿರುಪತಿಗೆ ಹೋಗ ಬೇಕಲ್ಲವೇ ? ನಡೆ; ಮಠಕ್ಕೆ ಹೋಗಿ ಗುರುಗಳಿಂದ ಅಜ್ಞೆಯನ್ನು ಪಡೆದು ಹೊರಡೋಣ. ಶ್ರೀನಿವಾಸನತ್ತ ಮನಸೆಳೆಯುತ್ತಾ ಇದೆ. ನಡೆ.

ವೆಂಕಟಾಚಲನಿಲಯಂ ವೈಕುಂಠಪುರವಾಸಂ ॥ ಪ ॥
ಪಂಕಜನೇತ್ರಂ ಪರಮ ಪವಿತ್ರಂ
ಶಂಖಚಕ್ರಧರ ಚಿನ್ಮಯ ರೂಪಂ ॥ ಅ. ಪ ॥

ಅಂಬುಜ ಭವ ವಿನುತಂ ಅಗಣಿತ ಗುಣಧಾಮಂ ।
ತುಂಬುರು ನಾದ ಗಾನ ವಿನೋದಂ
ಅಂಬುಧಿ ಶಯನಂ ಆಗಣಿತ ನಾಮಂ ॥ 1 ॥

ಪಾಪಿ ಪಾಂಡವ ಪಾಲಂ ಕೌರವ ಹರಣಂ ।
ಬಾಹು ಪರಾಕ್ರಮ ಫಣಿಪತಿ ಶಯನಂ ।
ಅಹಲ್ಯಾ ಶಾಪ ವಿಮೋಚನ ಚರಣಂ ॥ 2 ॥

ಸಕಲ ವೇದ ವಿಚಾರಂ ಸರ್ವಜೀವಿನೋಕಾರಂ ।
ಮಕರ ಕುಂಡಲಧರ ಮದನ ಗೋಪಾಲಂ
ಭಕ್ತವಿಭೂಷಣ ಪುರಂದರ ವಿಠಲಂ ॥ 3 ॥

(ಎಂದು ಹಾಡುತ್ತಾ, ದಾಸರು ಮಗನೊಡನೆ ನಿಷ್ಕ್ರಮಿಸುವರು.)

ತೆರೆ ಬೀಳುವುದು.

ತೃತೀಯಾಂಕವು ಸಮಾಪ್ತವಾಯಿತು.

ಶ್ರೀಮಧ್ವೇಶಾರ್ಪಣಮಸ್ತು

# ನಾಲ್ಕನೇ ಅಂಕ

( ಇದು "ಶ್ರೀನಿವಾಸನ ಆನಂದ ನಿಲಯ"; ಅರ್ಥಾತ್ ಬೆಟ್ಟದ ಮೇಲಿನ ವೆಂಕಟರಮಣನಗುಡಿ. ಸ್ವಾಮಿಯ ಗರ್ಭ ಗುಡಿಯ ಪಕ್ಕದಲ್ಲಿಯೇ ಪ್ರಾಚೀನ ಕಟ್ಟಡದಿಂದ ಶೋಭಿಸುವ ಯಜ್ಞಮಂಟಪ. ರಾತ್ರಿ ಸುಮಾರು 10 ಗಂಟೆಯ ಸಮಯ. ಪುರಂದರದಾಸರು ಶ್ರೀನಿವಾಸನ ಏಕಾಂತಸೇವೆಯನ್ನು ಮುಗಿಸಿ ಕೊಂಡು ಬರುವರು. )

ಪವಡಿಸು ಪರಮಾತ್ಮನೇ ಸ್ವಾಮಿ...ಪವಡಿಸು ಪರಮಾತ್ಮನೇ
ಭವರೋಗ ವೈದ್ಯನೇ ಭಕ್ತರ ಪ್ರಿಯನೇ ॥ ಪ ॥

(ಪಲ್ಲವಿಯನ್ನು ಮಾತ್ರ ಹೇಳಿ ನಗುವರು.)

( ಈ ಪಲ್ಲವಿಯನ್ನು ವಚನರೂಪದಲ್ಲಿಯಾದರೂ ಹೇಳಬಹುದು )

ನಿನ್ನ ಸೇವೆಯಲ್ಲಾಸಕ್ತರಾದ ನಿನ್ನ ಭಕ್ತರಿಗೇ ಆಹಾರ ನಿದ್ರೆಗಳಿಲ್ಲವೆಂದ ಮೇಲೆ, ನಿನಗೆ ನಿದ್ರೆಯೇ! ಕಲ್ಪಾಂತರದಲ್ಲಿ ಯೋಗನಿದ್ರಾಮುದ್ರಿತನಾಗಿ ರಮೆಗೆ ಆನಂದವನ್ನು ಕೊಡುವ ಪ್ರಭೂ! ನಿನ್ನ ಸರ್ವ ಕಾರ್ಯ ಕಲಾಪಗಳೂ ಭಕ್ತರಿಗಾಗಿಯೇ! ನಿನ್ನ ಲೀಲೆಯನ್ನು ತಿಳಿಯಲು ಯಾರಿಗೆ ತಾನೇ ಸಾಧ್ಯ! ಭಕ್ತವತ್ಸಲಾ! ನಿನ್ನವರಲ್ಲಿ ನಿನಗೆಷ್ಟು ವಾತ್ಸಲ್ಯ! ಅಲ್ಪನಾದ ನನಗೆ ತಾಳ್ಳಪಾಕರಿಂದ ಗೌರವಮರ್ಯಾದೆಗಳನ್ನು ಮಾಡಿಸಿದೆಯಾ! ಈ ನಿನ್ನ ಯಜ್ಞಮಂಟಪವನ್ನೇ ನನಗೆ ಬಿಡಾರವನ್ನಾಗಿ ಮಾಡಿಸಿ, ನಿನ್ನ ಏಕಾಂತ ಸೇವೆಯಲ್ಲಿ ಭಾಗವಹಿಸುವ ಭಾಗ್ಯವನ್ನು ಕರುಣಿಸಿದೆಯಲ್ಲ! ವೇಂಕಟಪ್ರಭೋ, ನಿನ್ನ ವಾತ್ಸಲ್ಯವೈಭವಗಳು ಈ ವಿಶ್ವದಲ್ಲಿ ಯಾವ ದೇವರಿಗುಂಟು!

( ಇಷ್ಟರಲ್ಲಿ ಅನ್ನಮಾಚಾರ್ಯರು ದಾಸರನ್ನು ನೋಡಲು ಬರುವರು. ಅನ್ನಮಾಚಾರ್ಯರು ತೆಲುಗಿನಲ್ಲಿ ಹಿರಿಯದಾಸರು. ಸುಮಾರು 36 ಸಾವಿರ ಹಾಡುಗಳನ್ನು ಮಾಡಿ ಹಂಗರ್ಪಿಸಿದ ಪೂತಾತ್ಮರು. ವಯಸು ಸುಮಾರು 93–94 ವರ್ಷಗಳು.)

ಮಾಚಾರ್ಯರು– ದಾಸವರೇಣ್ಯಾ, ನಮೋನಮಃ!

ರು – ( ಧಾವಿಸಿ ಬಂದು ಕೈಹಿಡಿದು ಕೊಂಡು, ) ಓ ಅನ್ನಮಾಚಾರ್ಯರಾ! ನಮೋನಮಃ; ಹೇಳಿ ಕಳಿಸಿದ್ದರೆ ನಾನೇ ಬರುತ್ತಿದ್ದೆನಲ್ಲ. ಈರಾತ್ರಿಯಲ್ಲಿ ಈ ಶ್ರಮವನ್ನೇಕೆ ತೆಗೆದುಕೊಂಡಿರಿ ?

ಅನ್ನಮಾ – ನಿಮ್ಮ ದರ್ಶನಾನಂದದ ಮುಂದೆ ಇದು ಶ್ರಮವೇ! ನಿಮ್ಮನ್ನು ನೋಡಿದರೆ ಆ ನಾದಬ್ರಹ್ಮವಿಠಲನನ್ನು ನೋಡಿದಂತಾಗುವುದು!

ದಾಸರು – ಕೇವಲ ಸಣ್ಣವನು ನಾನು. ಶ್ರೀನಿವಾಸನ ಪರಮಾನುಗ್ರಹಕ್ಕೆ ಪಾತ್ರರಾಗಿ, ಮೈಮರೆತು ನಾಟ್ಯವಾಡಿ ಆ ಸ್ವಾಮಿಯನ್ನೂ ಆಡಿಸಿದ ಹಿರಿಯರು ನೀವು! ನಿಮ್ಮ ದರ್ಶನದ ಭಾಗ್ಯ ಲಭಿಸಿರುವುದು ಸಹ ನನ್ನ ಪೂರ್ವಜನ್ಮದ ಸುಕೃತವೇ ಸರಿ.

ಅನ್ನಮಾ – ವಿಠಲನೊಡನೆ ಸರಸಸಲ್ಲಾಪಗಳಾಡಿದ ನಿಮ್ಮ ವ್ಯಕ್ತಿತ್ವವನ್ನು ಕೇಳಿದ್ದೆವು; ನೋಡುವ ಸುಯೋಗ ಇಂದು ಪ್ರಾಪ್ತವಾಯಿತು. ಆ,...ಸರಿ – ಇಲ್ಲಿ ನಿಮಗೆ ಸೌಕರ್ಯವಾಗಿದೆಯೇ?

ದಾಸರು – ವೈಕುಂಠದಲ್ಲಿ ಸೌಕರ್ಯದ ವಿಚಾರವೇ ?

ಅನ್ನಮಾ – ಭಲಾ! ಯುಕ್ತಿ ಯುಕ್ತವಾತು. ಶ್ರವಣಾನಂದವಾಯಿತು. ಇನ್ನು ಮುಂದೆ ಎಲ್ಲಾ ಸಮಯದಲ್ಲೂ ಯಥೇಚ್ಛವಾಗಿ ಸ್ವಾಮಿಯನ್ನು ನೀವು ಸೇವಿಸಬಹುದು. ಸ್ವಾಮಿ, ನಿಮ್ಮವ ನಾದಕಾರಣ .

ದಾಸರು – ಜ್ಞಾನವೃದ್ಧರು ನನ್ನನ್ನು ಪರೀಕ್ಷಿಸುತ್ತಿರುವಿರಿ.

ಅನ್ನಮಾ – ಇರಲಿ. ಬಹಳ ಹೊತ್ತಾಯಿತು. ಇನ್ನು ನಾನು ಬರುತ್ತೇನೆ. ಬರಲೇ ?

ದಾಸರು – ನಾನೂ ಅಲ್ಲಿಯವರೆಗೆ ತಮ್ಮ ಜೊತೆಗೆ ––

ಅನ್ನಮಾ – ಬೇಡ, ನೀವು ವಿಶ್ರಾಂತಿ ತೆಗೆದುಕೊಳ್ಳಿ. ಶ್ರೀನಿವಾಸಾ– (ಎಂದು ಹೇಳುತ್ತಾ ಹೊರಡಲು ಸಿದ್ಧರಾಗುವರು)

ದಾಸರು – ನಿಜ; ಶ್ರೀನಿವಾಸನೇ ಬೆಂಬಲಿಗನಾಗಿ ನಿಮ್ಮೊಡನೆ ತಿರುಗುತ್ತಿರಲು, ನಾನೇಕೆ!

ಅನ್ನಮಾ – (ಮುಗುಳ್ನಗುತ್ತಾ) ಸರಿ ... ಬರಲೇ ?

ದಾಸರು – ಆ – ಹೋಗಿ ಬನ್ನಿ, ನಮಸ್ಕಾರ.

(ಅನ್ನಮಾಚಾರ್ಯರು ಹೊರಟು ಹೋಗುವರು. ಅವರು ಹೋದಮೇಲೆ ದಾಸರು ಮಲಗಲು ನೆಲದಮೇಲೆ ವಸ್ತ್ರವನ್ನು ಹಾಕಿ, ಕೆಳಗೆ ಕೂತು, ಮಲಗುವುದಕ್ಕೆ ಮುಂಚೆ ಹೇಳಬೇಕಾದ ಈ ಕೆಳಕಂಡ ಸ್ತೋತ್ರಗಳನ್ನು ಹೇಳುವರು ).

– ರಾತ್ರಿಸೂಕ್ತ –

ರಾತ್ರೀ ವ್ಯಖ್ಯದಾಯತೀ ಪುರುತ್ರಾದೇವ್ಯ –
ಅಕ್ಷಭಿಃ ! ವಿಶ್ವಾ ಅಧಿಶ್ರಿಯೋ ಽಧಿತ ॥ 1 ॥

ಓರ್ವಪ್ರಾ ಅಮರ್ತ್ಯಾ ನಿವತೋ ದೇವ್ಯು ಉದ್ವತಃ
ಜ್ಯೋತಿಷಾ ಬಾಧತೇ ತಮಃ ।
ನಿರುಸ್ವಸಾರ ಮಸ್ಕೃ ತೋಷಸಂ ದೇವ್ಯಾಯತೀ
ಅಪೇದು ಹಾಸತೇ ತಮಃ ।

ಸಾನೋ ಅದ್ಯಯ ಸ್ಯಾವಯಂ ನಿತೇಯಾಮನ್ನ ವಿಕ್ಷ್ಮಹಿ
ವೃಕ್ಷೇನ ವಸತಿಂ ವಯಃ ।
ನಿಗ್ರಾಮಾಸೋ ಅವಿಕ್ಷತ ನಿಪದ್ವಂತೋ ನಿಪಕ್ಷಿಣಃ ।
ನಿಶ್ಯೇನಾ ಸಶ್ಚಿದರ್ಥಿನಃ ।

ಯಾವಯಾ ವೃಕ್ಯಂ ವೃಕಂ ಯವಯಸ್ತೇನ ಮೂರ್ಮ್ಯೇ
ಅಥಾನಂ ಸುತರಾ ಭವ ॥
ಉಪಮಾ ಪೇಪಿ ಶತ್ತ್ಮಃ ಕೃಷ್ಣಂ ವ್ಯಕ್ತಂ ಅಸ್ಥಿತ ।
ಉಷಋಣೇವ ಯಾತಯಾ ॥

ಉಪತೇಗಾ ಇವಾಕರಂ ವೃಣೇಷ್ವ ದುಹಿತರ್ದಿವಃ ।
ರಾತ್ರಿಸ್ತೋಮಂ ನಜಿಗ್ಯುಷೇ ॥

ಓಂ ಶಾಂತಿಃ ಶಾಂತಿಃ ಶಾಂತಿಃ ಹರಿಃ ಓಂ.

ಜಾಗ್ರದವಸ್ಥೆಗೆ ಕಾರಣನಾಗಿ, ಕಣ್ಣಲ್ಲಿ ನಿಂತು ಕಾರ್ಯ ಮಾಡುವ ವಿಶ್ವನಾಮಕ ಪರಮಾತ್ಮಾ! ನನ್ನಿಂದ ನೀಮಾಡಿ ಮಾಡಿಸಿದ ಸರ್ವ ಕರ್ಮವೂ ನಿನ್ನಡಿದಾವರೆಗಳಿಗೇ ಅರ್ಪಿತವು; ಕೃಷ್ಣಾರ್ಪಣಮಸ್ತು.

ಮಾತಾ ಪಿತಾ ಮೇ ಗತಿರಾತ್ಮ ಬಂಧೋ
ಭ್ರಾತಾ ಸಖಾ ಮೇ ಪರದೇವತಾ ಚ ।
ರಾಜಾಗುರುಃ ಸರ್ವಮಪಿ ತ್ವಮೇವ
ಯತ್ತೇ ಪ್ರಿಯಂ ದೇಹಿ ಸುಭಕ್ತಿಮದ್ಯ ॥

ಶರೀರ ಯಾತ್ರಾ ನುಮ ತೇ ಪ್ರಣಾಮಃ
ಸ್ತುತಿಸ್ತು ವಾಗಿಂದ್ರಿಯ ವೃತ್ತಿರಸ್ತು
ಸರ್ವಾ ಮನೋವೃತ್ತಿರನುಸ್ಮೃತಿಸ್ತೇ
ಸರ್ವಂ ತ್ವದಾರಾಧನ ಮೇವ ಭೂಯಾತ್ ॥

ಶಯ್ಯಾ ನಿದ್ರಾ ಕಾಲ ಗಳಲ್ಲಿ ಸ್ಮರಣೀಯನಾದ ಸಂಕರ್ಷಣ ಪದ್ಮನಾಭರೂಪ ಪ್ರಭೋ! ನಿನಗೆ ನಮೋ ನಮಃ. ಕಂಠ ಗತ ತೈಜಸರೂಪಾ ಹರೀ! ಉತ್ತಮ ಸ್ವಪ್ನಗಳನ್ನು ತೋರಿ ಉದ್ಧರಿಸು. ಹೃದ್ಗತ ಪ್ರಾಜ್ಞನಾಮಕ ಪ್ರಭೋ! ಸುಖ ಸುಷುಪ್ತಿಯನ್ನು ಒದಗಿಸು ತಂದೆ!

ಉಗಾಭೋಗ

ಹಗಲು ನಿನ್ನ ನೆನೆಯಲಿಲ್ಲ, ಹಸಿವೆ ತೃಷೆಯಿಂದ ।
ಇರುಳು ನಿನ್ನ ನೆನೆಯಲಿಲ್ಲ ನಿದ್ರೆಯ ಭರದಿಂದ ।
ಎರಡರ ಬಾಧೆಗೆ ಸಾನೊಳಗಾದೆನೋ ಪುರಂದರ ವಿಠ್ಠಲಾ ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುಧ್ಯಾತ್ಮನಾ ವಾನುಸೃತೇಃ ಸ್ವಭಾವಃ
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಹರೀ? ಸಂಕರ್ಷಣಾ!
ಪದ್ಮನಾಭಾ! ನಿನ್ನ ಚಿತ್ತ ತಂದೇ! ನಿನ್ನಚಿತ್ತ !!

(ಎಂದು ಹೇಳುತ್ತಾ ಮಲಗಲು ಪ್ರಯತ್ನ ಮಾಡುವರು. ಅದೇ ಸಮಯಕ್ಕೆ ಬಿಕ್ಕು ಬರುವುದು. ದಾಸರು ಎದ್ದು ಸುತ್ತಲೂ ನೀರಿನ ತಂಬಿಗೆಗಾಗಿ ಹುಡುಕುತ್ತಾ,)

ಹರೇ-ಕೃಷ್ಣಾ – ಮುಕುಂದಾ – ಅಚ್ಯುತಾ ... ಏನಿದು!

(ಎಂದು ಭಗವನ್ನಾಮಗಳನ್ನು ಧ್ಯಾನಿಸುವರು. ಬಿಕ್ಕು ನಿಲ್ಲುವು ದಿಲ್ಲ. ತಂಬಿಗೆ ಕಾಣಿಸುವುದಿಲ್ಲ. ಆಗ ಹೆಂಡತಿ ಮಗನನ್ನು ನೀರಿಗಾಗಿ ಕೂಗುವರು.)

ಸರಸ್ವತೀ! ... ಸರಸ್ವತೀ! ...

(ಉತ್ತರ ಬರುವುದಿಲ್ಲ)

ವರದಾ! ... ವರದಾ! ... ವರದಾ! ...

(ಶ್ರೀನಿವಾಸನು ಹಿನ್ನೆಲೆಯಿಂದ ದಾಸರ ಕೂಗಿಗೆ "ಓ" ಎಂದು ಪ್ರತ್ಯುತ್ತರಿಸುವನು.)

(ಹಿನ್ನೆಲೆಯಿಂದ) ... ಓ ...

ದಾಸರು – ಸ್ವಲ್ಪ ನೀರು ತೆಗೆದುಕೊಂಡು ಬಾ. ...

(ಸಾಕ್ಷಾತ್ ಶ್ರೀನಿವಾಸನು ವರದನ ರೂಪದಲ್ಲಿ, ತನ್ನ ಏಕಾಂತ ಸೇವೆಯಲ್ಲಿ ತನಗಾಗಿ ಇಟ್ಟ, ಬಂಗಾರದ ತಂಬಿಗೆಯಲ್ಲಿಯ ನೀರನ್ನು ತೆಗೆದುಕೊಂಡು ಬಂದು ನಿಲ್ಲುವನು.)

ವರದ – ಅಪ್ಪಾ, ... ನೀರು.

(ಎಂದು ತಂಬಿಗೆಯನ್ನು ದಾಸರಿಗೆ ಕೊಡುವನು.)

ದಾಸರು – ಆ, ... ತಾ.

(ಎಂದು ತಂಬಿಗೆಯನ್ನು ತೆಗೆದುಕೊಂಡು ಪದ್ಮ ಮಧ್ಯದಲ್ಲಿ ಬಿಕ್ಕುತ್ತಾ, ನೀರನ್ನು ಕುಡಿಯುವುದಕ್ಕಿಂತ ಮುಂಚೆ, ಜಲಾಂತ ರ್ಗತ ಭಗವದ್ರೂಪವನ್ನು ಚಿಂತಿಸುವರು.)

ದಾಸರು – ಬುಧಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸುಶೀಲಾ ಸಹಿತ ಶ್ರೀಕೃಷ್ಣಾ ನಿನಗರ್ಪಿತ.

(ಎಂದು ಹೇಳಿ ನೀರನ್ನು ಕುಡಿಯುವರು. ನೀರು ಕುಡಿದು ಆದ ಮೇಲೆ, ತಮ್ಮ ಕೈಯಲ್ಲಿರುವ ತಂಬಿಗೆಯನ್ನು ನೋಡಿ. ಚೆನ್ನಾಗಿ ಪರೀಕ್ಷಿಸಿ, ಅದು ಬಂಗಾರದ ತಂಬಿಗೆಯೆಂದು ತಿಳಿದವರಾಗಿ, ಆಶ್ಚರ್ಯ ಪಡುತ್ತಾ, ವರದನನ್ನುದ್ದೇಶಿಸಿ)

ವರದಾ, ಏನಿದು ?

ವರದ – ನೀರಿನ ತಂಬಿಗೆ !

ದಾಸರು – (ಸ್ವಲ್ಪ ಕೋಪದಿಂದ) ಇದು ನೀರಿನ ತಂಬಿಗೆ ಎಂದು ನನಗೆ ಗೊತ್ತು. ಅದಲ್ಲ ನಾನು ಕೇಳಿದ್ದು. ಇದು ಯಾವ ಲೋಹದ್ದು ?

ವರದ – ( ಶಾಂತತೆಯಿಂದ ನಗುತ್ತಾ ) ಬಂಗಾರದ ತಂಬಿಗೆ ತಂದೆ; ಸಂದೇಹವೇಕೆ ?

ದಾಸರು – ಸಂದೇಹವಿಲ್ಲ. ಇದು ಯಾರ ತಂಬಿಗೆ ?

ವರದ – ನನ್ನದೇ.

ದಾಸರು – ನಿನ್ನ ಕೈಗೆ ಹೇಗೆ ಬಂತು ?

ವರದ – ಒಬ್ಬ ಭಕ್ತ ನನಗಾಗಿ ಕೊಟ್ಟ.

ದಾಸರು – ವರದಾ, ಬಂಗಾರದಲ್ಲಿ ಆಶೆ ಅಂಕುರಿಸಿತೇ ?

ವರದ – ಇಲ್ಲ !

ದಾಸರು – ಮೋಹ ಹೆಚ್ಚಾಯಿತೇ ?

ವರದ – ಉ ಹುಂ ! ...

ದಾಸರು – ಮತ್ತೇಕೆ ಕೈಚಾಚಿ ಬೇಡಿದೆ ?

ವರದ – ನಾನೆಲ್ಲರನ್ನೂ ಬೇಡುತ್ತೇನೆಯೇ ? ಅತನು ಕೊಟ್ಟ. ನಾನು ತೆಗೆದು ಕೊಂಡೆ.

ದಾಸರು – ಕೊಟ್ಟರೆ, ತೆಗೆದುಕೊಂಡುಬಿಡುವುದೇ ?

ವರದ – ತಪ್ಪೇನಪ್ಪ; ಅವರು ಭಕ್ತಿಯಿಂದ ಅರ್ಪಿಸಿದುದನ್ನು ತೆಗೆದು ಕೊಳ್ಳುವುದು ನನ್ನ ಕರ್ತವ್ಯವಷ್ಟೆ.

ದಾಸರು – ( ಕೋಪದಿಂದ ) ಹಾಗಾದರೆ ತೆಗೆದುಕೊಳ್ಳುವುದನ್ನು ಬಿಡಲಾರೆಯಾ ?

ವರದ – ನಾನು ತೆಗೆದುಕೊಳ್ಳದೇ ಇದ್ದಲ್ಲಿ ಆ ಭಕ್ತನ ಉದ್ಧಾರ ಹೇಗಾಗಬೇಕು ?

ದಾಸರು – ಓಹೋ… ನೀನು ದೇವರಾಗಿ ಬಿಟ್ಟೆಯಾ ! ಜನರನ್ನುದ್ಧರಿಸುವ ಶಕ್ತಿ ನಿನಗುಂಟಾಯಿತೇ ! ಮಾಡಿದ್ದು ತಪ್ಪು; ಪುನಃ ಧೈರ್ಯದಿಂದ ಅದನ್ನು ಸಮರ್ಥಿಸಿ ಕೊಳ್ಳುತ್ತಿರುವೆಯಾ ?

ವರದ – ಅಪ್ಪಾ. ಇದು ತಪ್ಪಲ್ಲವೆಂದೇ ನನ್ನ ಅಭಿಪ್ರಾಯ.

ದಾಸರು – ನನ್ನ ವರದನೇನಾ, ಈ ರೀತಿ ಮಾತಾಡುತ್ತಿರುವುದು ! ವರದಾ, ನಿನ್ನ ಮತಿಗೆ ಯಾವ ವಿಧವಾದ ಆಘಾತವೂ ಆಗಿಲ್ಲ ತಾನೇ ? ವರದಾ, ಈ ಮೋಹಕ ಪದಾರ್ಥದಲ್ಲಿ ಮನವಿರಿಸ ಬೇಡ. "ಯತ್ರಾಸ್ತಿ ಭೋಗೋ ನ ಚ ತತ್ರ ಮೋಕ್ಷಃ" ಇದು ನನ್ನ ಸ್ವಾನುಭವ. ಸ್ವಾಮಿಯಿಂದ ದೂರ ಒಯ್ಯುವ ಈ ಸಂಪತ್ತಿನಲ್ಲಿ ಮಮತೆ ಬೆಳೆಸದೆ ಕಡಿದು ಹಾಕು.

ವರದ – ಅದೇನು ತಂದೆ ಹಾಗೆನ್ನುವೆ ? ಈ ಬಂಗಾರ ನನ್ನನ್ನು ಮೋಹಗೊಳಿಸುವುದೇ ? ಎಂದಿಗೂ ಇಲ್ಲ. ಇದನ್ನು ನಾನಿಟ್ಟು ಕೊಳ್ಳದೇ ಬಿಟ್ಟಲ್ಲಿ, ಆ ಭಕ್ತನೇ ಪುನಃ ಭಂಗಪಡಬೇಕಾಗುವುದು. ಆದಕಾರಣ ಇದು ನನ್ನಲ್ಲಿರುವುದೇ ಯುಕ್ತ.

ದಾಸರು – (ಕೋಪವನ್ನು ತಡೆಯಲಾರದೆ) ವರದಾ ! ಈ ಪದಾರ್ಥ ನಿನ್ನ ಮತಿಯನ್ನೇ ಕೆಡಿಸಿತೇ ! ಛೀ ಭ್ರಷ್ಟ !!

(ಎಂದು ತಂಬಿಗೆಯಿಂದ ವರದನ ತಲೆಗೆ ಹೊಡೆದು, ತಂಬಿಗೆಯನ್ನು ನೆಲದ ಮೇಲೆ ಹಾಕುವರು.)

ವರದ – ಅಪ್ಪಾ, ನನ್ನ ಮಾತಿನಲ್ಲೇನು ತಪ್ಪಿದೆ ? ನಿಜವನ್ನೇ ನಿಮ್ಮ ಮುಂದೆ ಹೇಳಿದ್ದೇನೆ.

ದಾಸರು – ಛೀ ... ಮಾತಿಗೆ ಮಾತು ಬೆಳೆಸುತ್ತಿರುವೆಯಾ ! ನಡೆ ಇಲ್ಲಿಂದ.

ವರದ – ಹಾಗೆಯೇ ಆಗಲಿ; ಇಲ್ಲೇ ಪಕ್ಕದಲ್ಲೇ ಇರುತ್ತೇನೆ; ನೀವು ಕರೆದರೆ ಮತ್ತೇ ಬರುತ್ತೇನೆ.

(ಎಂದು ತಂಬಿಗೆಯನ್ನು ತೆಗೆದುಕೊಂಡು ಅಲ್ಲಿಂದ ಹೊರಟು ಹೋಗುವನು. ದಾಸರು ವರದ ಹೊರಟು ಹೋದ ಮೇಲೆ ಮನಸ್ಸಿಗೆ ಪರಿತಾಪವಾಗಿ ಸ್ವಲ್ಪ ಅತ್ತಿಂದಿತ್ತ ತಿರುಗುವರು.)

ದಾಸರು – ದೇವಾ ! ಏನಿದು ! ಎಂದೂ ಇಲ್ಲದ ಮನೋವ್ಯಥೆಯನ್ನು ಇಂದು ಇಲ್ಲಿ ತಂದಿತ್ತೆಯಲ್ಲ ! ನೀನು ಕರುಣಿಸಿ ಕೊಟ್ಟ ವರದ ಇಂದು ವ್ಯಾಮೋಹಕ್ಕೊಳಗಾದನೇ ! ಶ್ರೀಹರೀ ! ಈ ಅಲ್ಪ ನನ್ನು ಉದ್ಧರಿಸಿದಂತೆ ಅವನನ್ನೂ ಉದ್ಧರಿಸು. ಕೈಬಿಡ ಬೇಡ. ನಿನ್ನ ದಿವ್ಯ ಸನ್ನಿಧಾನದಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳಿಗೆ, ಕೋಪತಾಪ ಗಳಿಗೆ ಸ್ಥಾನವೆ ! ಶಾಂತಿಯನ್ನೂ, ಚಿತ್ತಸ್ಥೈರ್ಯವನ್ನೂ ಕರುಣಿಸು; ತಂದೆ, ಕರುಣಿಸು. ...

(ಇಷ್ಟರಲ್ಲಿ ಹರಿಕಥಾ ಕಾಲಕ್ಷೇಪಕ್ಕೆ ಹೋದ ವರದ ಮತ್ತು ಸರಸ್ವತೀಬಾಯಿಯವರು ಪ್ರವೇಶಿಸುವರು.)

ಸರಸ್ವತಿ – ಸ್ವಾಮಿ, ಹರಿಕಥಾ ಕಾಲಕ್ಷೇಪದಲ್ಲಿ ಕುಳಿತ ನಮಗೆ ಸಮಯವೇ ತಿಳಿಯದಾಯಿತು. ಬಹಳ ಆಲಸ್ಯವಾಯಿತು. ಏನಾದರೂ ಬೇಕಾಗಿತ್ತೇ ?

(ದಾಸರು ಏನೂ ಉತ್ತರಕೊಡದೆ ವರದನ ಕಡೆ ನೋಡುತ್ತಾ ಮೆಲ್ಲನೆ ವರದನ ಹತ್ತಿರ ಬಂದು ತಲೆಯನ್ನು ಮುಟ್ಟುತ್ತಾ)

ದಾಸರು – ವರದಾ ... ಬಹಳ ಪೆಟ್ಟಾಯಿತೆ ! ನೋವಾಗುತ್ತಿದೆಯೇ?

ವರದ – (ಆಶ್ಚರ್ಯಪಡುತ್ತಾ) ಅದೇನು ಹಾಗೆ ಕೇಳುತ್ತಿದ್ದೀರಿ ? ಯಾವ ಪೆಟ್ಟು ? ಯಾವ ನೋವು ?

ದಾಸರು – ಆಗಲೇ ಮರೆತೆಯಾ ! (ಸೌಮ್ಯತೆಯಿಂದ) ನೋಡು ಮಗು, ದುಡ್ಡಿನಲ್ಲಿ ವ್ಯಾಮೋಹವಿರಿಸಬಾರದು. ಸ್ವಾಮಿ ಸೇವೆಗೆ ಅದು ಮಹಾ ಬಂಧಕ. ಆ ಬಂಗಾರದ ತಂಬಿಗೆಯನ್ನು ಶೀಘ್ರವಾಗಿ ಶ್ರೀನಿವಾಸನ ಕೋಶಕ್ಕೊಪ್ಪಿಸಿಬಿಡು.

ವರದ – ( ಹೆಚ್ಚಿನ ಆಶ್ಚರ್ಯವನ್ನು ತೋರುತ್ತಾ ) ಏನಪ್ಪಾ! ನೀವು ಹೇಳುವುದೇ ಅರ್ಥವಾಗುತ್ತಾ ಇಲ್ಲ. ಯಾವ ದುಡ್ಡು ? ನಾನೆಲ್ಲಿ ವ್ಯಾಮೋಹಿತನಾಗಿದ್ದೇನೆ ? ಯಾವ ಬಂಗಾರದ ತಂಬಿಗೆ ? ನನ್ನಲ್ಲೆಲ್ಲಿದೆ ?

ದಾಸರು – ವರದಾ, ಏನಿದು? ಹೀಗೆ ಮಾತನಾಡುತ್ತಾ ಇದ್ದೀಯಾ? (ಸರಸ್ವತಿಯ ಕಡೆಗೆತಿರುಗಿ) ಸರಸ್ವತೀ, ನೋಡಿದೆಯಾ ಇವನ ವ್ಯವಹಾರ ! ಈಗ ತಾನೆ ನಾನು ಕೂಗಿದಾಕ್ಷಣ ಬಂಗಾರದ ತಂಬಿಗೆಯಲ್ಲಿ ಕುಡಿಯಲು ನೀರು ತಂದು ಕೊಟ್ಟು, ಆ ತಂಬಿಗೆ ತನ್ನದೆಂದು, ಒಬ್ಬ ಭಕ್ತಕೊಟ್ಟನೆಂದು, ತೆಗೆದು ಕೊಂಡಲ್ಲಿ ತಪ್ಪೇನೆಂದು ನನ್ನೊಡನೆ ವಾದಿಸಿದ. ಆಗ ನಾನು ತಡೆಯ ಲಾಗದ ಕೋಪದಲ್ಲಿ ಇವನ ತಲೆಗೆ ಹೊಡೆದೆ.

ವರದ – ಅಯ್ಯೋ ! ಅಪ್ಪಾ; ಇಲ್ಲವೇ ಇಲ್ಲ. ನಾನೂ, ಅಮ್ಮ, ಇಲ್ಲಿಯವರೆವಿಗೂ ಹರಿಕಥಾಶ್ರವಣದಲ್ಲಿಯೇ ಇದ್ದೆವು. ಈಗಲೇ ಬರುತ್ತಿದ್ದೇವೆ, ಹೌದಲ್ಲೇನಮ್ಮ ?

ಸರಸ್ವತಿ – ಹೌದುಸ್ವಾಮಿ, ನೀವು ಹೇಳುತ್ತಿರುವುದು ಆಶ್ಚರ್ಯವಾಗಿದೆ. ನಿಜವಾಗಿಯೂ ವರದ ಇಲ್ಲಿಯವರೆಗೆ ನನ್ನ ಪಕ್ಕದಲ್ಲೇ ಇದ್ದ !

ದಾಸರು – (ಆಶ್ಚರ್ಯವನ್ನು ತೋರುತ್ತಾ) ಏನೂ! ವರದ ಬರಲೇ ಇಲ್ಲವೇ? ಹಾಗಾದರೆ, ಇದಕ್ಕೂ ಮುಂಚೆ ಇಲ್ಲಿಗೆ ಬಂದವರು !!!

ಸರಸ್ವತಿ – ಅದೇಸ್ವಾಮಿ, ಅತಿವಿಚಿತ್ರವಾಗಿದೆ ! ನೀವೋ, ವರದ ಬಂದನೆಂದು ಹೇಳುತ್ತಿದ್ದೀರಿ. ವರದನೇನೋ ನನ್ನನ್ನು ಬಿಟ್ಟು ಕದಲೇ ಇಲ್ಲ. ಹಾಗಾದರೆ ? ಅಂ .. ಸ್ವಾಮಿ ! ಸಂದೇಹವಿಲ್ಲ; ನಮ್ಮ ಪಾಲಿನ ಬಂಧುವಾದ ಶ್ರೀನಿವಾಸನೇ, ನೀವು ವರದಾ ಎಂದು ಕೂಗಿದಾಕ್ಷಣ, ವರದನಾಗಿ ಬಂಗಾರದ ತಂಬಿಗೆಯಲ್ಲಿ ನೀರನ್ನು ನಿಮಗಾಗಿ ತಂದು ಕೊಟ್ಟಿರುವನು.

(ಈ ಮಾತು ಹೇಳಿದಾಕ್ಷಣ ಪುರಂದರದಾಸರಿಗೆ ಭಗವಂತನು ವರದನ ವೇಷದಲ್ಲಿ ಬಂದು ನಿಂತು ಆಡಿದ ಮಾತುಗಳು ಒಂದೊಂದಾಗಿ ಜ್ಞಾಪಕಕ್ಕೆ ಬರುವುವು. ಇವು ಹಿನ್ನೆಲೆಯಿಂದ ಕೇಳಿಸುವುವು.)

(ಹಿನ್ನೆಲೆಯಿಂದ)

ಒಬ್ಬ ಭಕ್ತ ನನಗಾಗಿ ಕೊಟ್ಟ
ಒಬ್ಬ ಭಕ್ತ ನನಗಾಗಿ ಕೊಟ್ಟ
ಒಬ್ಬ ಭಕ್ತ ನನಗಾಗಿ ಕೊಟ್ಟ

ನಾನೆಲ್ಲರನ್ನೂ ಬೇಡುತ್ತೇನೆಯೇ ?
ನಾನೆಲ್ಲರನ್ನೂ ಬೇಡುತ್ತೇನೆಯೇ ?
ನಾನೆಲ್ಲರನ್ನೂ ಬೇಡುತ್ತೇನೆಯೇ ?
ನಾನು ತೆಗೆದು ಕೊಳ್ಳದಿದ್ದರೆ
ಆ ಭಕ್ತನ ಉದ್ಧಾರ ಹೇಗಾಗ ಬೇಕು ?
ಆ ಭಕ್ತನ ಉದ್ಧಾರ ಹೇಗಾಗ ಬೇಕು ?
ಆ ಭಕ್ತನ ಉದ್ಧಾರ ಹೇಗಾಗ ಬೇಕು ?

ಈ ಬಂಗಾರ ನನ್ನನ್ನು ಮೋಹಗೊಳಿಸುವುದೇ ?
ಈ ಬಂಗಾರ ನನ್ನನ್ನು ಮೋಹಗೊಳಿಸುವುದೇ ?

(ಭಗವಂತನ ಮಾತುಗಳ ನಿಜಮರ್ಮವನ್ನರಿತು, ಆನಂದಾಶ್ರುಗಳನ್ನು ಸುರಿಸುತ್ತಾ, ಮೈಮರೆತು ಗಟ್ಟಿಯಾಗಿ.)

ಸು — ಹೌದು ಸರಸ್ವತೀ, ಹೌದು!! ನೀನಂದ ಮಾತು ಸತ್ಯ. ಸಂದೇಹವಿಲ್ಲ. ಸ್ವರ್ಣಪಾತ್ರೆಯೊಡನೆ ವರದನ ರೂಪದಲ್ಲಿ ಬಂದು, ನನ್ನ ಮುಂದೆ ನಟಿಸಿದವನು ನಮ್ಮ ಪಾಲಿನ ವರದನೇ! ವರದಾ! ಶ್ರೀನಿವಾಸ! ವೆಂಕಟೇಶ! ನಮದ್ದೇವತಾವಾಳಿ ಮಂದಾರಮಾಲಾಸ್ರವನ್ಮಕರಂದ ಧ್ರವಾಕ್ಷಾಲಿತ ಪಾದ ಪಂಕೇರುಹ! ಕವಿಭಿರೀಡಿತ ಕೈರವದಳಶ್ಯಾಮಾ! ನಿಸ್ಸೀಮ! ಪರಂಧಾಮಾ! ಏನಿದು ನಿನ್ನ ಆಟ! ಶ್ರುತಿತತಿಗಳಭಿಮಾನಿ ಲಕ್ಷ್ಮೀಸ್ತುತಿಗಳಿಗೆ ಗೋಚರಿಸದಪ್ರತಿಹತ ಮಹೈಶ್ವರ್ಯಾದ್ಯಖಿಳ ಸದ್ಗುಣ ಗಣಾಂಭೋಧಿ! ನಿನ್ನ ಮಾಯೆಗೆ ಬ್ರಹ್ಮ, ಸಮೀರ, ವಾಣಿ, ಫಣೀಂದ್ರ, ವೀಂದ್ರ, ಭವ, ಇಂದ್ರ ಮೊದಲಾದಮರರೆಲ್ಲರೂ ಮೋಹಿತರಾಗಿ ಮೈಮರೆವರೆಂದ ಮೇಲೆ, ಒಂದೂ ಅರಿಯದ, ಪರಮ ಪಾಮರನಾದ, ಪಾಪಿಯಾದ, ನಾನೆಷ್ಟರವ!

ಉಗಾಭೋಗ

ತಪ್ಪು ಸಾಸಿರಗಳ ಒಪ್ಪಿಕೊಳ್ಳಯ್ಯೋ ಕೃಪಾಳು
ಮುಪ್ಪುರವನಳಿದಂಥ ಮುನೀಂದ್ರ ವಂದ್ಯಾ
ಅಪ್ರಮೇಯನೆ ನಿನ್ನ ಅಮ್ನಾತ ಮಹಿಮೆಗಳ

ಅಪ್ಪುನಿಧಿಯಲ್ಲಿ ಪುಟ್ಟಿದವಳರಿಯಳೋ
ಕಪ್ಪು ಮೇಘ ಕಾಂತಿಯಿಂದೊಪ್ಪುವ ತಿಮ್ಮಪ್ಪಾ
ಅಪ್ರಾಕೃತ ರೂಪಾ, ಪುರಂದರವಿಠಲಾ.

ಶ್ರೀನಿವಾಸಾ, ಮಗನ ರೂಪದಲ್ಲಿ ಬಂದು ನಿಂತ. ನಿನ್ನ ರಣ ಧ್ಭೃಂಗ ಸಂಸಕ್ತ ಸಂಪುಲ್ಲ ಮಂದಾರ ಮಾಲಾವಲೀ ಲಗ್ನ ಸತ್ಕಂಠ ಶೋಭಾಭಿರಾಮವೂ, ರಾಕೇಂದು ಕೋಟಿ ಪ್ರಭಾ ಭಾಸಿತವೂ, ದರ್ಶನ ಮಾತ್ರದಿಂದ ಸಕಲ ಸಂತಾಪ ಹಾರಕವೂ ಆದ ಆ ನಿನ್ನ ದಿವ್ಯವಾದ ಮುಖಕಮಲದ ಮೇಲೆ ಈ ನನ್ನ ತುಚ್ಛ ಕೈಯಿಂದ ಹೊಡೆದೆನಲ್ಲ ! ಅಯ್ಯೋ ನಾನೆಷ್ಟು ಪಾಪಿ ! ನಾನೆಷ್ಟು ಪಾಪಿ ! ( ಎಂದು ದುಃಖಿಸುವರು ).

ಸರಸ್ವತಿ — ಸ್ವಾಮಿ, ಹಾಗೆನ್ನಬೇಡಿ, ಹಾಗೆನ್ನಬೇಡಿ.

ವರದ — ಅಪ್ಪ, ನೀವು ಪೂತಾತ್ಮರು. ಸ್ವಾಮಿಯು, ಸಾಕ್ಷಾತ್ ಬಂದು ನಿಮಗೆ ದರ್ಶನವಿತ್ತಿದ್ದಾನೆ. ಆ ಸರ್ವೇಶನ ಸರ್ವ ಕಾರ್ಯ ಕಲಾಪಗಳು ಭಕ್ತ ಜನೋದ್ಧಾರಕಕ್ಕಾಗಿಯೇ ! ಚಿಂತಿಸ ಬೇಡಿ, ತಂದೇ, ಚಿಂತಿಸಬೇಡಿ.

(ಪರವಶಭಾವದಿಂದ ವರದನ ಮಾತಿನತ್ತ ಕಿವಿಗೊಡದೆ)

ದಾಸರು — ದಯಾನಿಧೇ ! ದಯಾನಿಧೇ ! ಇಂದ್ರ, ರುದ್ರ, ಭೃಗು, ಗುರುಪತ್ನಿ ಮೊದಲಾದವರು ಮಾಡ್ದ ಮಹಾಪರಾದಗಳನ್ನು ಎಣಿಸದ ಕರುಣಾಸಮುದ್ರನು ನೀನು ! ಪಾಪಕರ್ಮಗಳನ್ನು ಸಹಿಸುವಲ್ಲಿ, ನಿನಗೆ ಸಮರಾದ ಸುರರನ್ನು ಈ ಪಯೋಜ ಭವಾಂಡದಲ್ಲಿ ನಾನೆಲ್ಲಿಯೂ ಕಾಣೆ ! ಸ್ಮರಿಸುವವರಪರಾಧ ಗಳನ್ನು ಸ್ಮರಿಸದ ಸಕಲೇಷ್ಟಪ್ರದಾಯಕನೆಂಬ ಬಿರುದು ನಿನಗಿದೆ. ಅರಿಯದೇ ಮಾಡಿದ ನನ್ನ ಅಪರಾದವನ್ನು ಕ್ಷಮಿಸಲಾರೆಯಾ ! ಕಾಯಲಾರೆಯಾ ! ಬಂದುನಿಲ್ಲಲಾರೆಯಾ !

ರಾ : ತಾಳ :

ಬಾರಯ್ಯ ವೆಂಕಟರಮಣ ಭಕ್ತರ ನಿಧಿಯೇ
ತೋರಯ್ಯ ನಿನ್ನದಯ ತೋಯಜಾಂಬಕನೇ ॥ ಪ ॥

ವೇದಗೋಚರ ಬಾರೋ – ಆದಿ ಕಚ್ಛಪ ಬಾರೋ
ಮೋದ ಸೂಕರ ಬಾರೋ – ಸದಯ ನರಸಿಂಹ ಬಾರೋ ॥ 1 ॥

ವಾಮನ ಭಾರ್ಗವ ಬಾರೋ – ರಾಮಕೃಷ್ಣನೆ ಬಾರೋ
ಪ್ರೇಮದ ಬುದ್ಧನೆ ಬಾರೋ – ಸ್ವಾಮಿ ಕಲ್ಕಿನೀಬಾರೋ ॥ 2 ॥

ಅರವಿಂದನಾಭ ಬಾರೋ – ಸುರರ ಪ್ರಭುವೆ ಬಾರೋ
ಪುರುಹೂತವಂದ್ಯ ಬಾರೋ – ಪುರಂದರವಿಠಲ ಬಾರೋ ॥ 3 ॥

(ಶ್ರೀನಿವಾಸನು ಪ್ರತ್ಯಕ್ಷನಾಗುವುದಿಲ್ಲ).

ಪ್ರಭೋ, ದರ್ಶನ ಕೊಡಲಾರೆಯಾ! ಕರೆಯದೇ ಇದ್ದಾಗ ಬಂದೆ! ಈಗ ಅಂಗಲಾಚಿ ಬೇಡುತ್ತಿರುವೆನು. ಒಮ್ಮೆ ದರ್ಶನ ಕೊಡು ತಂದೆ, ಒಮ್ಮೆ ದರ್ಶನಕೊಡು. ಹು,... ಹೌದು ನೀನೇಕೆ ಬರುವೆ! ... ನಾ ಮಾಡಿದ ಕಾರ್ಯ ಕ್ಷಮಾರ್ಹ ವಲ್ಲ. ವೆಂಕಟೇಶ! ಜಗಜ್ಜನ್ಮ ಸಂರಕ್ಷಣ ಜ್ಞಾನ ಸಂಹಾರ ಬಂಧಾದಿಗಳಿಗೆ ಕಾರಣನಾದ, ಮುಕ್ತವಾಗೀಶ ಪಕ್ಷೀಶ, ಭೋಗೇಶ, ದೇವೇಶ, ಕಂದರ್ಪ, ಸೂರ್ಯಾದಿ ಮುಖ್ಯಾ ಮರರಿಂದ ಸೇವಿತನಾದ, ನಿನ್ನನ್ನು ಹೊಡೆದ ಈ ಕೈಯನ್ನು ಕತ್ತರಿಸಿಬಿಡುವೆ! ಈ ನನ್ನ ತಲೆ ಇನ್ನು ಇರಬಾರದು! ಪ್ರಾಣ ತ್ಯಾಗ ಮಾಡುವುದೇ ಒಳಿತು!

( ಎಂದು ಹೇಳುತ್ತಾ, ನೆಲದಮೇಲೆ ಕೂತುಕೊಂಡು ನೆಲಕ್ಕೆ ಕೈಗಳನ್ನು ಎರಡು ಸಲ ಬಡಿಯುವರು )

ಸರಸ್ವತಿ – ಸ್ವಾಮೀ! ಸ್ವಾಮೀ!

ವರದ – ಅಪ್ಪಾ! ಅಪ್ಪಾ!

ದಾಸರು – (ಹುಚ್ಚು ಹಿಡಿದವರಂತೆ) ಸರಸ್ವತೀ! ಸರಸ್ವತೀ! ಸಕಲ ಜಗ ದ್ರಕ್ಷಕ ನನ್ನು ಗಾಯಗೊಳಿಸಿದ ಕೈಗಳಿವು! ಸರಸ್ವತೀ, ಸಕಲ ಜಗದ್ರಕ್ಷಕ ನನ್ನು ಗಾಯಗೊಳಿಸಿದ ಕೈಗಳಿವು! ಆ, ಇದೇ ಸರಿ ಯಾದ ಶಿಕ್ಷೆ! ಪ್ರಾಣತ್ಯಾಗವೇ ಸರಿಯಾದ ಮಾರ್ಗ!

ಸರಸ್ವತಿ, ವರದ – ಸ್ವಾಮೀ, ಜಗನ್ನಾಥ! ಶ್ರೀನಿವಾಸ! ವೆಂಕಟೇಶ! ಉದ್ಧರಿಸು, ತಂದೇ ಉದ್ಧರಿಸು!

(ಎಂದು ಸರಸ್ವತೀ ವರದ ಇಬ್ಬರೂ ಶ್ರೀನಿವಾಸನನ್ನು ಕೂಗುವರು. ದಾಸರು ತಮ್ಮ ತಲೆಯನ್ನು ನೆಲಕ್ಕೆ ಹೊಡೆದು ಕೊಳ್ಳುವರು. *ಇಷ್ಟರಲ್ಲಿವಾದ್ಯ ಘೋಷ ಗಳಾಗುವುವು. ಶ್ರೀನಿವಾಸನು ಓಡಿ ಬಂದು ದಾಸರನ್ನು ಹಿಡಿದು ಕೊಂಡು.)

ಶ್ರೀನಿವಾಸ – ದಾಸರೇ, ನಾನು, ನಿಮ್ಮ ಶ್ರೀನಿವಾಸ! ಬಂದಿದ್ದೇನೆ, ನೋಡಿ.

ದಾಸರು – ( ಆನಂದದಿಂದ )

ಪ್ರಭೋ, ದೇವ ದೇವ ... ವರದ ... ಶ್ರೀನಿವಾಸ,

ಸುಳಾದಿ

ಅಚ್ಯುತಾನಂತ ಗೋವಿಂದ ಮುಕುಂದ ವಾಮನ
ವಾಸುದೇವ ನಾರಾಯಣ
ಸಚ್ಚಿದಾನಂದಸ್ವರೂಪ ಗೋಪಾಲ ಪುರುಷೋತ್ತಮ
ಪರಂಧಾಮ ನಾರಾಯಣ.

ಮತ್ಸ್ಯ ಕೂರ್ಮ ವರಾಹ ನಾರಸಿಂಹ ವಾಮನ
ಭಾರ್ಗವ ರಾಘವ ಕೃಷ್ಣ ಬುದ್ಧ ಕಲ್ಕ್ಯವತಾರ
ಅನಂತಾವತಾರ ನಾರಾಯಣ.

ಅಪಾರ ಮಹಿಮನೇ ನಾರಾಯಣ
ಸರ್ಪಶಯನನೇ ನಾರಾಯಣ
ಶ್ರೀಪುರಂದರವಿಠಲ ವಿಬುಧೇಶ ತಿರುವೆಂಗಳಪ್ಪ
ಎನ್ನಪ್ಪನೇ ನಾರಾಯಣ ಅಚ್ಯುತಾನಂತ ಗೋವಿಂದ

---

* ಶ್ರೀನಿವಾಸನ ಪಾತ್ರಪ್ರವೇಶವನ್ನು ಬಿಡಬೇಕೆನ್ನುವ ವರು ಇಲ್ಲಿ ಹಿನ್ನೆಲೆಯಿಂದ, ಅಂಕದ ಕೊನೆಯಲ್ಲಿ ಬರುವ "ದಾಸರೆ; ! ನಾನು ಕಾಲಾಂತರ್ಗತ .... ಎಂಬ ಶ್ರೀನಿವಾಸನ ಮಾತನ್ನು ಮಾತ್ರ ಹೇಳಿಸಿ ಪುನಃ ದಾಸರಿಂದ ಧನ್ಯೋಽಸ್ಮಿಪ್ರಭೋ ಧನ್ಯೋಽಸ್ಮಿ ಎನ್ನುವ ಮಾತನ್ನು ದಾಸರಿಂದ ಹೇಳಿಸಿ, ಪುನಃ ಹಿನ್ನೆಲೆಯಿಂದಲೇ ದಾಸರೇ, ಇನ್ನು ನಿಮ್ಮ ಯಾತ್ರೆ .... ಕಾದಿರುತ್ತೇನೆ ಎನ್ನುವ ವರೆಗೆ ಹೇಳಿಸಿ ಮುಗಿಸಬೇಕು. ದಾಸರೇ ನಾನು ನಿಮ್ಮ ಶ್ರೀನಿವಾಸ ... ಎಂಬ ಮಾತಿನಿಂದ ಹಿಡಿದು ಮನಶ್ಶಾಂತಿ ಯನ್ನುಂಟು ಮಾಡು ದೇವ" ಎನ್ನುವವರಿಗೆ ಮಧ್ಯದಲ್ಲಿರುವ ಎಲ್ಲಾ ಮಾತುಗಳನ್ನೂ ಸುಳಾದಿಯನ್ನೂ ಬಿಡಬೇಕು.

ದೇವಾಧಿದೇವ ! ದೀನಜನಮಂದಾರಾ ! ಸನಕಾದಿ ಮುನಿ ಮಾನಸ ಮಂದಿರವಿಹಾರ ! ಮಾಮನೋಹರ ! ಶರಣು, ಶರಣು ! ಅಂಗುಟಾಗ್ರದಿ ಅಮರತರಂಗಿಣಿಯನ್ನು ಪಡೆದ, ಪರಮ ಪವಿತ್ರವಾದ ಈ ನಿನ್ನ ಅಪ್ರಾಕೃತ ಪಾದಗಳಿಗೆ ಶರಣು !

ಶ್ರೀನಿವಾಸ – ದಾಸರೇ, ಆನಂದವಾಯಿತೇ !

ದಾಸರು – ಇದಕ್ಕಿಂತಲೂ ಹೆಚ್ಚಿನ ಆನಂದವೇನಿದೆಸ್ವಾಮಿ !! ಆನಂದ ಸಾಗರದಲ್ಲಿ ಓಲಾಡಿಸಿದೆ ! ಜಗನ್ನಾಟಕ ಸೂತ್ರಧಾರಿ ! ಆದರೆ, ಆದರೆ !

ಶ್ರೀನಿವಾಸ – ಏನದು ? ನಿಸ್ಸಂಕೋಚವಾಗಿ ಹೇಳಿ.

ದಾಸರು – ದೇವಾ, ಬಾಧ್ಯಾಧಿಗತನೂ, ಬಾಧಕಸ್ಥಿತನೂ, ಬಾಧ್ಯನೂ, ಬಾಧಕನೂ, ನೀನೆಂಬ ಜ್ಞಾನವಿತ್ತಿರುವೆ. ಆದಾಗ್ಯೂ, ಅದೇ ತಕ್ಕೋ ನಿನಗೆ ಪೆಟ್ಟುಕೊಟ್ಟೆನಲ್ಲಾ ಎಂಬ ಮನೋವ್ಯಥೆ ನನ್ನನ್ನು ಬಹುವಾಗಿ ಪೀಡಿಸುತ್ತಾ ಇದೆ. ಈ ಘೋರಾಪರಾಧಕ್ಕೆ ಶಿಕ್ಷೆಯನ್ನು ವಿಧಿಸಿ ಮನಃಶ್ಶಾಂತಿಯನ್ನು ಉಂಟು ಮಾಡು ದೇವಾ !

ಶ್ರೀನಿವಾಸ – ( ನಗುತ್ತಾ ) ದಾಸರೇ, ನಾನು ಕಾಲಾಂತರ್ಗತ, ಕಾಲ ಪ್ರವರ್ತಕ, ಕಾಲನಿವರ್ತಕ, ಕಾಲೋತ್ಪಾದಕ, ಕಾಲಮೂರ್ತಿಯಾದರೂ, ಕಾಲಾತಿಕ್ರಮಣವನ್ನು ಎಂದೂಮಾಡಲಾರೆ. ನನ್ನ ಭಕ್ತರನ್ನೂ ಬಿಡಲಾರೆ. ಎಂದೆಂದಿಗೂ ನಾನು ನಿಮ್ಮವನೇ. ನಿಮ್ಮೊಡನೆ ಅಟ ನನಗೆ ಬಹು ಆನಂದ. ತೃಪ್ತಿಯಾಯಿತೇ!

ದಾಸರು – ಧನ್ಯೋಸ್ಮಿ, ಪ್ರಭೋ, ಧನ್ಯೋಸ್ಮಿ ! ನಮೋನಮಃ !!

ಶ್ರೀನಿವಾಸ – ಇನ್ನು ನಿಮ್ಮ ಯಾತ್ರೆ ಪಂಢರಾಪುರದತ್ತ ಸಾಗಲಿ. ನಿಮಗಾಗಿ ಕಾದಿರುತ್ತೇನೆ.

ಶುಭಮಸ್ತು

ದಾಸರು – ಆಜ್ಞೆ, ಪ್ರಭೋ, ಆಜ್ಞೆ !

( ಎಲ್ಲರೂ ನಮಸ್ಕರಿಸುವರು. )

( ಮೆಲ್ಲನೆ ತೆರೆ ಬೀಳುವುದು )

ಚತುರ್ಥಾಂಕವು ಸಮಾಪ್ತವಾಯಿತು

ಮಧ್ವೇಶಾರ್ಪಣಮಸ್ತು

# ಪಂಚಮಾಂಕ

## ವಿಷ್ಕಂಭಕ

ತೆರೆ ಏಳುವುದು

( ಅದು ಘಾಡರಪುರದ ಒಂದು ಬೀದಿ. ಇಬ್ಬರು ಹರಟೆವಾದಿಗಳಾಗಿ ಮಾತಾಡುತ್ತಾ ಪ್ರವೇಶಿಸುವರು )

ಅಧಿಕಪ್ರಸಂಗಿ – ಇಷ್ಟಕ್ಕೂ ನೀನನ್ನುವುದಾದರೂ ಏನು ? ನೀಹಿಡಿದ ಪ್ರಾಣಿಗೆ ಮೂರೇ ಕಾಲೆಂದಲ್ಲವೇ !

ಅರ್ಚಕರು – ಇಲ್ಲ; ಹಾಗೆನ್ನುತ್ತಿರುವುದು ನೀನು. ನಾನು ಹೇಳುತ್ತಿರುವೆನೆಂದು ವಾದಿಸುತ್ತಿರುವಿ.

ಅಧಿಕಪ್ರಸಂಗಿ – ಓಹೋ ಹಾಗಾ !

ಅರ್ಚಕರು – ಇಲ್ಲವಾ ? ಹುಂ ಈ ಅಂಥಪ್ರಭುತ್ವ, ಅಂಥ ವ್ಯವಸ್ಥೆ, ಅಂಥ ವ್ಯವಹಾರ, ಇವನ್ನೇ ನಿನ್ನಂಥವರು ಸಮರ್ಥಿಸುತ್ತಿರುವುದು. ಹೇಳುವುದಕ್ಕಾದರೂ ಅರ್ಥವಿರಬೇಕಯ್ಯ.

ಅ . ಪ್ರ – ಓಹೋ ! ಕೆಟ್ಟ ಕೆಲಸ ಮಾತ್ರ ಎಷ್ಟಾದರೂ ಮಾಡಬಹುದು. ದಂಡಿಸಿದ ಪ್ರಭುತ್ವ ಮಾತ್ರ ಕಣ್ಣಿಲ್ಲದ್ದು, ಅಲ್ಲವೇ !

ಅರ್ಚಕರು – ಏನಯ್ಯಾ, ಆ ಕೆಟ್ಟಕೆಲಸ ?

ಅ . ಪ್ರ – ಹಾಗಾದರೆ ಅದು ಕೆಟ್ಟ ಕೆಲಸವೇ ಅಲ್ಲೇನು ?

ಅರ್ಚಕರು – ಯಾವುದಯ್ಯ ?

ಅ . ಪ್ರ – ಯಾವುದಾ ! !

ಅರ್ಚಕರು – ಯಾವುದಯ್ಯಾ ಹೇಳು?

ಅ . ಪ್ರ – ಮತ್ತೆ " ಯಾವುದು " ಅಂತೀಯಾ ?

ಅರ್ಚಕರು – ಯಾವುದೋ ? ಬಾಯಿಬಿಟ್ಟು ಹೇಳಬಾರದೇ ?

ಅ . ಪ್ರ – ಏನು ಹೇಳುವುದು ? ನಿನ್ನಂಥಾ ಬುದ್ಧಿ ಇಲ್ಲದ ಜನ ಇರುವ ಕಾರಣ ಸೋಮಾರಿಗಳು, ಜೂಜುಗಾರರು, ವ್ಯಭಿಚಾರಿಗಳು, ದಾಸರೆಂದು ಹೆಸರಿಟ್ಟುಕೊಂಡು ಪ್ರಜೆಗಳನ್ನು ಮೋಸಗೊಳಿಸಿ ಜೀವಿಸುತ್ತಿರುವುದು !

ಅರ್ಚಕರು – ಪೂರ್ವಾಪರಗಳನ್ನು ಆಲೋಚಿಸದೆ, ಮಹನೀಯರನ್ನು ವ್ಯರ್ಥ ವಾಗಿ ನಿಂದಿಸಿದರೆ ರೌರವಾದಿ ನರಕಗಳು ತಪ್ಪಲಾರವು.

ಅ. ಪ್ರ – ಆ! ಮಹನೀಯರೇ! ನೀನೇ ಹೇಳಬೇಕು. ಹೇಳುವುದು ಪುರಾಣ; ಮಾಡುವುದು ಅಕ್ರಮ. ಸದ್ಯ ನನ್ನ ಅದೃಷ್ಟ! ನಾನೂ ಸಹ ಆ ಅಂಗನಾದಾಸನಾದ ಕಳ್ಳದಾಸನನ್ನು ಪೂರ್ಣ ವಾಗಿ ನಂಬಿ ಬಲೆಯಲ್ಲಿ ಬೀಳಲಿಲ್ಲ! ನಂಬಿದ್ದರೆ, ನಾನೂ ನಿನ್ನಂತೆ ಅರ್ಥವಿಲ್ಲದ ವ್ಯರ್ಥವಾದಗಳನ್ನು ಮಾಡುವವನಾಗು ತ್ತಿದ್ದೆ.

ಅರ್ಚಕರು – ಹುಂ – ಆ ಪರಮ ಭಕ್ತಾಗ್ರೇಸರರನ್ನು ಪೂರ್ಣವಾಗಿ ಅರ್ಥಮಾಡಿಕೊಂಡಿದ್ದರೆ, ಅವರೆಂಥಾ ಭಾಗವತೋತ್ತಮರು, ಆದರ್ಶಜೀವಿಗಳು, ಕರುಣಾಮೂರ್ತಿಗಳು, ವೇದಾಂತಿಗಳು ಎಂದು ನಿನಗೆ ತಿಳಿಯುತ್ತಿತ್ತು.

ಅ. ಪ್ರ – ಆ ಆ – ಈಗ, ಅಲ್ಲಿ ಚೆನ್ನಾಗಿ ಅರ್ಥವಾಗುತ್ತಲೇ ಇದೇ: ಹಗ ಲೆಲ್ಲಾ ಭಾಗವತ ಕಲಾಪ, ರಾತ್ರಿಯಾದರೆ ಭಾಮಾಕಲಾಪ! ಎಂಥಾನಟನೆ! ಎಂಥಾನಟನೆ! ಅವ್ – ಅವ್ – ಅವ್ – ದೇವಾಲಯದಲ್ಲಿ ಪ್ರವೇಶಿಸಿ, ಪರಂಪರೆಯಿಂದ ಸ್ವಾಮಿಯ ಅಭಯ ಹಸ್ತವನ್ನು ಅಲಂಕರಿಸಿದ್ದ ವಜ್ರವೈಢೂರ್ಯ ಮರಕತ ಮಾಣಿಕ್ಯಾದಿ ಜೀವ ಮಣಿಸ್ಥಗಿತ ಕಂಕಣವನ್ನಪಹರಿಸಿ, ಒಬ್ಬ ವೇಶ್ಯೆಗೆ! ವೇಶ್ಯೆಗೆ!, ಕೊಟ್ಟನಲ್ಲ!!! ಎಷ್ಟುಧೈರ್ಯ ಎಷ್ಟುಧೈರ್ಯ!!

ಅರ್ಚಕರು – ಆಯಿತಾ!

ಅ. ಪ್ರ – ಅಬ್ಬಾ!! ನಾನು ದೇವ ನರ್ತಕಿ, ನಾನು ದೇವನರ್ತಕಿ, ಎಂದು ಸೋಗು ಹಾಕಿ, ಗಂಡಸರನ್ನೇ ಹತ್ತಿರ ಬರಿಸಲಾರೆ ಎಂಬ ಆ ವಗಲಾಡಿ ಈ ದಾಸನನ್ನು ಹಿಡಿದಳು. ಅವಳಿಗೇನು ಹೋಗುವ ಕಾಲವೋ!

ಅರ್ಚಕರು - ಒಂದು ಮಾತು —

ಅ. ಪ್ರ – ಆ, ಆ, ಅಷ್ಟೆ! ಇಂಥವರಾದರೆ ಗುಟ್ಟುರಟ್ಟಾಗದು, ಅದೂ ಅಲ್ಲದೆ, ದೇವಾಲಯದಲ್ಲಿ ಪ್ರತಿದಿನ ನಾಟ್ಯದ ಹೆಸರಿನಲ್ಲಿ

ವಯ್ಯಾರವನ್ನು ತೋರುತ್ತಾ, ಸ್ವಾಮಿ ಕಂಕಣದ ಮೇಲೆ ಕಣ್ಣು ಹಾಕಿದ್ದಳು. ಸುಲಭವಾಗಿ ಅದನ್ನು ಅಪಹರಿಸಲು ಈ ದಾಸರೇ ಸರಿಯಾದ ವ್ಯಕ್ತಿ ಎಂದು ತಿಳಿದು ಸಂಚು ಹೂಡಿದಳು. ಅಷ್ಟೇ, ನಿಮ್ಮ ದಾಸರಿಗೆ ಅವಳ ಹುಚ್ಚು ಹಿಡಿದು ಕೇಳಿದಾಕ್ಷಣ, ಕಂಕಣವನ್ನು ಕದ್ದು ಅವಳಿಗೆ ಕೊಟ್ಟಿದ್ದಾನೆ. ಆದರೆ, ಗ್ರಹಚಾರ ಸರಿಯಾಗಿಲ್ಲದೆ ವ್ಯವಹಾರ ಮುಗ್ಗರಿಸಿತು.

ಅರ್ಚಕರು – (ಕಿವಿಗಳನ್ನು ಮುಚ್ಚಿಕೊಂಡು) ಶ್ರೀಹರೀ ! ಶ್ರೀಹರೀ ! ಅಯಿತಾ, ಸ್ವಲ್ಪ ನನ್ನ ಮಾತು ಕೇಳುತ್ತೀಯಾ ? ಇದೆಲ್ಲಾ ನಿನ್ನ ಕಲ್ಪನೆ. ದಾಸರು ಜ್ಞಾನಭಕ್ತಿ ವೈರಾಗ್ಯಗಳು ಮೂರ್ತೀಭವಿಸಿದ ಉತ್ತಮರು. ಅನೇಕ ಅಜ್ಞಾನಿಗಳನ್ನು ಉದ್ಧರಿಸಿದ ಆದರ್ಶ ಜೀವಿಗಳು. ಇಲ್ಲದೇ ಇದ್ದರೆ ತಮ್ಮ ಸರ್ವಸಂಪತ್ತನ್ನು ತೃಣವಾಗಿ ಎಣಿಸಿ, ಪರಿತ್ಯಜಿಸಬೇಕಾದ ಅವಸರವೇನಿತ್ತು ! ದಾಸಪಂಥವನ್ನನುಸರಿಸಬೇಕಾದ ಅಗತ್ಯವೇನಿತ್ತು ! ಭಿಕ್ಷಾವೃತ್ತಿಯಿಂದ ಜೀವಿಸಬೇಕಾದ ಕರ್ಮವೇಕೆ ! ವೇಶ್ಯೆ ಎಲ್ಲಿ ! ದಾಸರೆಲ್ಲಿ ! ಸ್ವಾಮಿ ಕಂಕಣವೆಲ್ಲಿ ! ಅಪಹರಿಸುವುದೆಲ್ಲಿ ! ಹಾಕಿದ ಬಾಗಿಲುಗಳು ಹಾಕಿದಂತೇ ಇರಲು, ಕಂಕಣ ಕಾಣದಾಗೋಣ, ಆ ಕಂಕಣವನ್ನೇ ! ಮರುದಿನವೆ ! ಆ ವೇಶ್ಯೇ ! ಹಾಕಿ ಕೊಂಡು ಬಂದು, ಬಂಧಿತಳಾಗಿ ! ದಾಸರೇ ತನಗೆ ಕೊಟ್ಟರೆಂದು ಹೇಳೋಣ, ಇದನ್ನು ನಿಮ್ಮಂಥವರು ನಂಬೋಣ. ಅರ್ಥಾನರ್ಥಸಂಬಂಧಗಳೇನಾದರೂ ಕಾಣುತ್ತಿವೆಯೇ ?

ಆ. ಪ್ರ – ಆ, ಆ, ಕಾಣತ್ತಾನೇ ಇವೆಯಲ್ಲ, ಗುಡಿಯಲ್ಲಿ ಕಟ್ಟಿಹಾಕಿ ಹೊಡೆದ ನೂರು ಛಾಟಿಯ ಬರೆಗಳು, ನಿಮ್ಮ ದಾಸರ ಮೈಮೇಲೆ ! ಇನ್ನೂ, ನಾಳೆ ವಿಚಾರಣೆ ಪೂರ್ತಿಯಾದ ಮೇಲೆ ಮತ್ತೇನೇನು ಕಾಣುತ್ತವೆಯೋ !

ಅರ್ಚಕರು – ಅಜ್ಞಾನದಲ್ಲಿ ನೀನಂದ ಮಾತಿಗೆ ಪಶ್ಚಾತ್ತಾಪ ಪಡಬೇಕಾದ ಸಮಯ ಬಂದೇ ಬರುತ್ತದೆ.

ಆ. ಪ್ರ – ಸರಿ – ಸರಿ – ನಿನ್ನ ಈ ಜೊಳ್ಳು ಪುರಾಣವನ್ನು ಬೇರೆಯಾರ ಮುಂದಾದರೂ ಹೇಳು. ನನಗೆ ಅವಸರದ ಕೆಲಸವಿದೆ; ಬರುತ್ತೇನೆ. ( ಎಂದು ಹೇಳಿ ನಿಷ್ಕ್ರಮಿಸುವನು. )

ಕರು – ವಿಠಲಾ, ನಿನ್ನನ್ನೇ ನಂಬಿದ ಪುರಂದರದಾಸರಿಗೆ ಎಂತಹ ಸಂಕಷ್ಟ ಪರಿಸ್ಥಿತಿಯನ್ನು ತಂದೊಡ್ಡಿದೆ ! ಅವರಾವಪರಿಸ್ಥಿತಿಯಲ್ಲಿರುವರೋ ದಯೆದೋರಿ ಒಮ್ಮೆ ಕಣ್ತೆರೆದು ನೋಡು ತಂದೆ, ಒಮ್ಮೆ ಕಣ್ತೆರೆದು ನೋಡು.

( ಎಂದು ಕೈ ಮುಗಿದು ಪ್ರಾರ್ಥಿಸುತ್ತಾ, ಬಾಧೆಯಿಂದ ಹೊರಟು ಹೋಗುವರು. )

ವಿಷ್ಕಂಭಕವು ಸಮಾಪ್ತವಾಯಿತು

———

# ಐದನೇ ಅಂಕ

ತೆರೆ ಏಳುವುದು.

( ಅದು ವಿಠಲನ ಮಂದಿರ. ರಂಗಸ್ಥಳದ ಮಧ್ಯದಲ್ಲಿ ಒಂದು ಸ್ತಂಭ. ಆ ಸ್ತಂಭಕ್ಕೆ ದಾಸರನ್ನು ಕಟ್ಟಿ ಹಾಕಿದ್ದಾರೆ. ದಾಸರ ಮೈಮೇಲೆ ಅಲ್ಲಲ್ಲಿ ಛಾಟಿಯ ಬರೆಗಳು ಕಾಣುತ್ತವೆ. ದಾಸರು ಮೈಮೇಲೆ ಎಚ್ಚರವಿಲ್ಲದೆ ನಿಂತಿರುವರು. ಅವರ ಪಾದದ ಹತ್ತಿರ ಮೂರ್ಛಾವಸ್ಥೆಯಲ್ಲಿ ದಾಸರ ಪತ್ನಿ ಸರಸ್ವತೀಬಾಯಿ ಬಿದ್ದಿರುತ್ತಾರೆ. ಒಂದು ಪಕ್ಕದಲ್ಲಿ ಕಾವಲುಗಾರನು ನಿಂತಿರುತ್ತಾನೆ. ಇಷ್ಟರಲ್ಲಿ ವಿಠಲನ ಅರ್ಚಕರು ಬುಟ್ಟಿಯಲ್ಲಿ ಹೂವು, ಹಣ್ಣು, ಒಂದು ತಂಬಿಗೆಯಲ್ಲಿ ನೀರು ಹಿಡಕೊಂಡು ಪ್ರವೇಶಿಸಿ, ದಾಸರ ಪರಿಸ್ಥಿತಿಯನ್ನು ನೋಡಿ, ಬಾಧೆಯಿಂದ ತಾವು ತಂದ ಪದಾರ್ಥಗಳನ್ನು ಅಲ್ಲೇ ಒಂದು ಪಕ್ಕದಲ್ಲಿಟ್ಟು, ಮುಂದೆ ಬಂದು )

ಪೂಜಾರಿ – ನಾಯಕ, ಎಲ್ಲಾ ಆಯಿತಲ್ಲ! ಇನ್ನೂ ದಾಸರನ್ನು ಏಕೆ ಕಟ್ಟಿ ಹಾಕಿದ್ದೀರಿ ? ( ದಾಸರನ್ನು ನೋಡುತ್ತಾ ಬಾಧೆಯಿಂದ ) ಅಯ್ಯೋ ಪಾಪ! ಮೈ ಮೇಲೆ ಎಚ್ಚರ ಸಹ ಇಲ್ಲ. ಸ್ವಲ್ಪ ನೀರಾದರೂ ಕುಡಿಸುತ್ತೇನೆ; ಅನುಮತಿ ಕೊಡುತ್ತೀಯಾ?

ನಾಯಕ – ಊ — ಪೂಜಾರಿಗಳೇ, ಅದೆಲ್ಲಾ ಮಾಡಕೂಡದು. ಇನ್ನೂ ವಿಚಾರಣೆ ಇದೆಯಂತೆ; ಅಲ್ಲಾ ಪೂಜಾರಿಗಳೇ, ನೀವೇಕೆ ಬಾಧೆಪಡುತ್ತಾ ಇದ್ದೀರಿ ?

ಪೂಜಾರಿ – ನಾಯಕ, ದಾಸರ ವ್ಯಕ್ತಿತ್ವವನ್ನು ತಿಳಿದು ಅವರಲ್ಲಿ, ಅಭಿಮಾನ ಗೌರವ ಭಕ್ತಿಗಳನ್ನು ಮಾಡುವವರಲ್ಲಿ ನಾನೂ ಒಬ್ಬನು ಅಧಿಕಾರಿಗಳಿಗೆ ಹೇಳುವ ಶಕ್ತಿ ಇಲ್ಲದೆ, ಶಿಕ್ಷೆಗೆ ಅಡ್ಡ ಬೀಳುವ ಸಾಮರ್ಥ್ಯವಿಲ್ಲದೆ, ಕಣ್ಣಿಂದ ಈ ಪೂತಾತ್ಮರಿಗಾಗುವ ದಂಡನೆಯನ್ನು ನೋಡಲಾರದೆ ಹೊರಟು ಹೋದೆ. ದೇವರೇ ಮೌನವಹಿಸಿದ್ದಾನೆ. ಇನ್ನು ಯಾರಿಗೆ ಮೊರೆ ಇಡುವುದು !

ನಾಯಕ – ( ನಗುತ್ತಾ ) ಒಳ್ಳೇ ಪೂಜಾರಿಗಳು ನೀವು ! ಬೆಳ್ಳಗಿರೋದೆಲ್ಲ ಹಾಲಗುತ್ತೇನ್ರೀ ? ಹಾಗಾದರೆ ಈ ಪುರಂದರದಾಸರು ತಪ್ಪೇ ಮಾಡಿಲ್ಲಾ ಅನ್ನುತ್ತೀರಾ ?

ಪೂಜಾರಿ – ಈ ಮಹಾನುಭಾವರೇ ಹಾಗೆ ಮಾಡಿದ್ದರೆ, ಕಾಲಗತಿಯೇ ನಿಂತು ಹೋಗಬೇಕಾಗಿತ್ತು ! ಇದೆಲ್ಲಾ ಸುಳ್ಳು.

ನಾಯಕ - ಏನು ! ಇದೆಲ್ಲಾ ಸುಳ್ಳೆ ? ಎಲ್ಲಾ ಸುಳ್ಳು ! ದೇವರ ಕೈಯ್ಯಲ್ಲಿರುವ ಕಂಕಣ ಕಳುವಾದದ್ದು ಸುಳ್ಳೆ ? ಅವೇಶ್ಯೆ ಅದೇ ಕಂಕಣವನ್ನು ಹಾಕಿಕೊಂಡು ಸನ್ನಿಧಿಗೆ ಬಂದದ್ದು ಸುಳ್ಳೆ ? ಅವಳು ಅಧಿಕಾರಿಗಳ ಮುಂದೆ `ದಾಸರೇ ತನಗೆ ಆ ಕಂಕಣವನ್ನು ಕೊಟ್ಟರೆಂದು ಹೇಳಿದ್ದು. ಸುಳ್ಳೆ ? ಅಧಿಕಾರಿಗಳು ವಿಚಾರಿಸಿದಾಗ, ದಾಸರು ಮೌನವಾಗಿ ನಿಂತರಲ್ಲ ಅದು ಸುಳ್ಳೆ ? ಯಾವುದು ಸುಳ್ಳು ?

ಪೂಜಾರಿ - ನಾಯಕ, ಎಲ್ಲಾ ಸಮಯದಲ್ಲೂ ಕಣ್ಣಿಗೆ ಕಾಣುವುದೆಲ್ಲವೂ ಸತ್ಯವಾಗಲಾರದು. ಕೆಲವೊಮ್ಮೆ ನಮ್ಮ ಕಣ್ಣೇ ನಮ್ಮನ್ನು ಮೋಸಗೊಳಿಸುತ್ತದೆ. ದಾಸರ ಹಿಂದಿನ ಚರಿತ್ರೆಯನ್ನು ಒಮ್ಮೆ ನೆನೆದರೆ, ಈ ದಿನದ ಘಟನೆಯನ್ನು ಯಾರೂ ಎಂದೂ ನಂಬಲಾರರು. ದಾಸರು ನವಕೋಟಿನಾರಾಯಣರೆಂದು ಬಿರುದು ಹೊತ್ತವರು. ಆ ಸರ್ವ ಸಂಪತ್ತನ್ನೂ ತೃಣಪ್ರಾಯವಾಗಿ ಗಣಿಸಿ, ಹೆಂಡತಿ ಮಕ್ಕಳೊಡನೆ ದಾಸ್ಯಭಾವವನ್ನು ಧರಿಸುತ್ತಾ, ಮನೆಯಿಂದ ಹೊರಹೊರಟ ಪೂತಾತ್ಮರು. ಅಂಥಾ ಇವರು, ಇಂದು, ತಮ್ಮ ದೈವದ ಕಂಕಣವನ್ನು ಅಪೇಕ್ಷಿಸಿ, ಅಪಹರಿಸಿ, ಅವೇಶ್ಯೆಗೆ ಕೊಡುವರೇ! ಎಂದೂ ಸಾಧ್ಯವಿಲ್ಲ! ಈ ಸಂಘಟನೆಯ ಹಿಂದೆ ಯಾವುದೋ ಒಂದು ಮರ್ಮವಡಗಿದೆ.

ನಾಯಕ - ಹಾಗಾದರೆ, ಪೂಜಾರಿಗಳೆ, ವಿಚಾರಣೆಯ ಸಮಯದಲ್ಲಿ ದಾಸರೇಕೆ ಮೌನವಾಗಿ ನಿಂತರು ? ಮೌನ ಅಂಗೀಕಾರ ಸೂಚಕ ತಾನೇ !

ಪೂಜಾರಿ - ಅದೇ ಅಪ್ಪ, ಜ್ಞಾನಿಗಳ ವ್ಯವಹಾರ. ದೇವರು ಸುಖ ಕೊಟ್ಟರೂ, ದುಃಖಕೊಟ್ಟರೂ, ಮಾತಾಡದೆ ಅನುಭವಿಸುವುದೇ ಅವರ ಹಿರಿಮೆ. ಪರಮಾತ್ಮನ ಸಂಕಲ್ಪವೆಂತಲೇ ದಾಸರು ಮೌನ ವಹಿಸಿರಬೇಕು !

ನಾಯಕ - ಹೌದಾ ! ಏನೋ, ನೀವು ಹೇಳಿದ್ದೆಲ್ಲಾ ನನಗೆ ಗೊತ್ತಿಲ್ಲ. ತಿಳಿದರೂ ನಾನು ಮಾಡುವುದು ಮಾತ್ರವೇನಿದೆ ?

ಪೂಜಾರಿ - ಹೌದು; ಪಾಪ, ನಿನ್ನದೇನಿದೆ ! ಆ ಭಕ್ತಬಂಧು ಪಾಂಡುರಂಗನೇ ಕೈಬಿಟ್ಟು, ನೋಡುತ್ತಿರಲು, ಯಾರಿಗೆ ತಾನೇ ಏನು ಮಾಡಲು ಸಾಧ್ಯ !

( ಎಂದುಹೇಳಿ ಪಾಂಡುರಂಗನತ್ತ ತಿರುಗಿ ಪ್ರಾರ್ಥಿಸುವರು )

ಪಾಂಡುರಂಗಾ ! ಭಕ್ತವರದಾ ! ಭಕ್ತರಕ್ಷಕ ! ಏನೀ ನಿನ್ನ ಪರೀಕ್ಷೆ ! ನಿನಗಾಗಿ ಸರ್ವಸ್ವವನ್ನೂ ತ್ಯಾಗವಮಾಡಿ, ನಿನ್ನನ್ನೇ ನಿರಂತರ ಕೊಂಡಾಡುವ ದಾಸರಿಗಾ ಈ ಶಿಕ್ಷೆ! ಸ್ವಾಮೀ! ಧರ್ಮರಕ್ಷಕಾ ! ಇನ್ನು ನೀನು ಮೌನ ವಹಿಸಿದರೆ, ಮುಂದೆ ಆಸ್ತಿಕತೆಯೇ ಉಳಿಯಲಾರದು. ಸರ್ವತ್ರ ಅಧರ್ಮವು ಸ್ವೇಚ್ಛಾ ವಿಹಾರ ಮಾಡುವುದು. ರಂಗಾ ! ಇದು ಪುರಂದರದಾಸರಿಗೆ ಶಿಕ್ಷೆಯಲ್ಲ; ನೀನು ನಿರ್ಮಾಣಮಾಡಿ ಸ್ಥಿರಗೊಳಿಸಿದ ಧರ್ಮಕ್ಕೇ ಪರೀಕ್ಷೆ ! ಆ ಧರ್ಮಕ್ಕೇ ಪೆಟ್ಟು ! ನಮ್ಮಂಥಾ ಅನೇಕ ಅಲ್ಪರನ್ನು ಉದ್ಧರಿಸಿದ ದಾಸರನ್ನು ಕಾಡುಕೋ, ತಂದೇ ಕಾಡುಕೋ !

(ಇಷ್ಟರಲ್ಲಿ ಬಾಧೆಯನ್ನು ತೋರುತ್ತಾ, ಮೌನದಿಂದ ತಲೆತಗ್ಗಿಸಿ, ದಾಸರ ಮಗ ವರದ ಪ್ರವೇಶಿಸುವನು. ಪೂಜಾರಿಗಳು ವರದನ ಹತ್ತಿರ ಬಂದು, ಕೈಹಿಡಿದು )

ಮಗೂ ವರದಾ, ರಾಜರೇನೆಂದರು ?

ವರದ – ಹುಂ – ಅನ್ನುವುದಕ್ಕೇನಿದೆ. ನವನೀತವನ್ನುಂಡ ಈ ವಿಠಲನ ಮನಸ್ಸೇ ಕರಗದಿರಲು, ಧನಮದದಿಂದ ಕೊಬ್ಬಿ ಉಬ್ಬಿದ ಕಠಿಣ ಹೃದಯಿಗಳಾದ ರಾಜರುಗಳ ಮನಸ್ಸು ಕರಗುವುದೆ ? ಇಲ್ಲ ಎಂದಿಗೂ ಇಲ್ಲ ! ಆರ್ಚಕರೆ, ಈ ವಿಠಲನು ಬ್ರಹ್ಮಾಂಡ ದೊಳಗೆ ಎಲ್ಲಿಡೆಯಲ್ಲೂ ಭಕ್ತರವಸರಕ್ಕೆ ಅಮರಗಣಸಹಿತ ಬಂದೊದಗುವನೆಂಬುದು ಅಸತ್ಯ. ಕಾಯೇನ, ವಾಚಾ, ಮನಸಾ ತನ್ನನ್ನೇ ನಂಬಿ, ಸರ್ವವನ್ನು ಅರ್ಪಿಸಿದ ನನ್ನ ತಂದೆಗೆ ಈ ಶಿಕ್ಷೆಯದಗಿದ್ದರೂ, ಮೌನ ವಹಿಸಿರುವ ಈ ವಿಠಲನು ಇನ್ನು ಭಕ್ತ ಬಂಧುವಲ್ಲ ! ಶರಣಾಗತ ರಕ್ಷಾಮಣಿಯಲ್ಲ !

ಪೂಜಾರಿ – ( ಆವೇಶಪೂರಿತನಾದ ವರದನನ್ನು ತಡೆಯುತ್ತಾ ) ಮಗೂ ವರದಾ - -

ವರದ – ವಿಠಲಾ, ! ಕರಿ, ಧ್ರುವ, ಬಲಿ, ಪಾಂಚಾಲಿ, ಅಹಲ್ಯೆಯರನ್ನು ಕಾಯ್ದ ಆರ್ತರಕ್ಷಕನಾ ನೀನು ? ಪರಮ ಪಾಪಿಯಾದ ಅಜಾಮಿಳನ ತಪ್ಪುಗಳನ್ನು ಗಣಿಸದೇ ರಕ್ಷಿಸಿದ ಕರುಣಾಮಯನಾ ನೀನು ? ಇಲ್ಲ, ಇಲ್ಲ ! ವಿಚಾರಿಸಿ ನೋಡಿದಲ್ಲಿ ಇವೆಲ್ಲವೂ ಕೇವಲ ಕಟ್ಟು ಕಥೆಗಳು ! ನಂಬಿದ ಭಕ್ತರನ್ನು ರಕ್ಷಿಸದೇ ಇರುವ ನಿನಗೆ ಈ ಬಿರುದುಗಳೆಲ್ಲಾ ಏಕೆ ? ಏಕೆ ?
( ಎಂದು ಅಳುವನು )

ಪೂಜಾರಿ – ವಂದಾ ... ...

( ಎಂದು ಹೇಳುತ್ತಾ ಘಟ್ಟಿಯಾಗಿ ಅಪ್ಪಿಕೊಳ್ಳುವನು. ಇಷ್ಟರಲ್ಲಿ ಘಂಟೆ ಝಾಗಟೆ ಶಂಖವಾದ್ಯಗಳಾಗುವುವು )

ಆಕಾಶವಾಣಿ – ಭಕ್ತರೇ, ನನ್ನ ದಾಸ ನಿರಪರಾಧಿ! ನನ್ನಿಂದಲೇ ಈ ಸಂಘಟನೆ ಕಲ್ಪಿಸಲ್ಪಟ್ಟಿತು. ಸ್ವತಃ ನಾನೇ ಆವೇಶ್ಯೆಗೆ ದಾಸರ ವೇಷದಲ್ಲಿ ಕಂಕಣ ಕೊಟ್ಟೆ. ರಾಜನಿಗೆ ನನ್ನ ಆಜ್ಞೆಯೆಂದು ಈ ವಿಷಯವನ್ನು ತಿಳಿಸಿರಿ. ಇದೋ ನನ್ನ ಕಂಕಣ ನನ್ನ ಕೈಯಲ್ಲೇ ಇದೆ.

( ಎಲ್ಲರೂ ಆಶ್ಚರ್ಯಚಕಿತರಾಗಿ ಆನಂದ ಪರವಶರಾಗಿ ಪರಮಾತ್ಮನಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾರೆ )

ವರದ – ಪಾಂಡುರಂಗ ! ಪಾಂಡುರಂಗ ! ನನ್ನ ತಂದೇ !

ಪೂಜಾರಿ – ದೇವಾಧಿದೇವಾ ! ಪುಂಡರೀಕವರದಾ ! ಪಾಂಡುರಂಗ ! ನಾಯಕಾ, ಅದೋ ನೋಡು ! ಸ್ವಾಮಿಯ ಹಸ್ತದಲ್ಲಿ ಕಾಂತಿಯನ್ನು ಹೊರಚಿಮ್ಮುತ್ತಿರುವ ಕಂಕಣ ! ಖಜಾನೆಯಲ್ಲಿ ಭದ್ರ ಪಡಿಸಿದ ಕಂಕಣ ! ಆಗಲೇ ನಾನು ಹೇಳಿದೆನಲ್ಲಯ್ಯ ! ಈಗಲಾದರೂ ದಾಸರ ವ್ಯಕ್ತಿತ್ವ ತಿಳಿಯಿತೇ ?

( ನಾಯಕ ಗಲ್ಲಕ್ಕೆ ಹೊಡೆದು ಕೊಳ್ಳುತ್ತಾ, ದಾಸರಿಗೆ ನಮಸ್ಕರಿಸಿ, ಭಯಪಡುತ್ತಾ ಕೈಜೋಡಿಸಿ ಕೊಂಡು )

ನಾಯಕ – ತಿಳಿಯಿತು ಸ್ವಾಮಿ. ಅರಿಯದೆ ಏನೇನೋ ಮಾತಾಡಿದೆ ! ತಪ್ಪಾಯಿತು ಸ್ವಾಮಿ, ತಪ್ಪಾಯಿತು !

ಪೂಜಾರಿ – ನಾಯಕ, ಬೇಗ ಹೋಗಿ ರಾಜರಿಗೆ ಈ ವೃತ್ತಾಂತವನ್ನು ತಿಳಿಸಿ ಕರೆದು ಕೊಂಡುಬಾ.

ನಾಯಕ – ಅಯ್ಯೋ ಸ್ವಾಮಿ, ನಾನು ಹೇಳಿದರೆ ಬರುತ್ತಾರೆಯೆ ! ನೀವೂ ಬನ್ನಿ, ಕರೆದುಕೊಂಡು ಬರೋಣ.

ಪೂಜಾರಿ – ಹಾಗೇ ಆಗಲಿ. ( ಎಂದು ವರದನ ಕಡೆ ನೋಡುತ್ತಾ ) ವರದಾ ಜಾಗ್ರತೆ !

( ಎಂದು ಹೇಳುತ್ತಾ ಅವಸರವಸರವಾಗಿ ಪೂಜಾರಿಗಳು ಮತ್ತು ನಾಯಕ ಇಬ್ಬರೂ ಹೊರಟು ಹೋಗುವರು. ಇಬ್ಬರೂ ಹೋದ ವೇಳೆ ವರದನು ಆನಂದದಿಂದ ತಂದೆಯ ಹತ್ತಿರ ಬಂದು )

ವರದ — ಅಪ್ಪಾ, ಅಪ್ಪಾ, ಪಾಂಡುರಂಗ ನಮ್ಮನ್ನು ಕರುಣಿಸಿದ. (ಇಷ್ಟರಲ್ಲಿ ವೇಣುಗಾನವನ್ನು ಮಾಡುತ್ತಾ ಶ್ರೀಕೃಷ್ಣನು ಪ್ರತ್ಯಕ್ಷ ನಾಗುವನು. ವರದನು ಸಂಭ್ರಮಾಶ್ಚರ್ಯಭಕ್ತಿಗಳಿಂದ ಸ್ಥಾಣುವಿನಂತೆ ಸ್ವಾಮಿಯನ್ನು ನೋಡುತ್ತಾ ನಿಲ್ಲುವನು.)

ಬಾಲಕೃಷ್ಣ — ದಾಸರೇ, ಪುರಂದರ ದಾಸರೇ, ನಾನು, ಕೃಷ್ಣ, ನಿಮಗಾಗಿ ಬಂದಿದ್ದೇನೆ ನೋಡಿ.

(ದಾಸರ ಬಂಧನಗಳು ತಮ್ಮಷ್ಟಕ್ಕೆ ತಾವೇ ಕಡಿದು ಬೀಳು ವುವು. ದಾಸರಿಗೆ ಎಚ್ಚರಿಕೆ ಯಾಗುವುದು. ಕಣ್ತೆಗೆದು ನೋಡುವರು. ಸರಸ್ವತೀಬಾಯಿಯವರು ಸಹ ಏಳುವರು.)

ದಾಸರು — ಕೃಷ್ಣಾ! ಜಗದೋದ್ಧಾರ! ಭಕ್ತಜನಮಂದಾರ! ಮುಕುಂದ! ಸೌಶೀಲ್ಯ ಸೌಲಭ್ಯ ವಾತ್ಸಲ್ಯ ಗಾಂಬೀರ್ಯ ಔದಾರ್ಯ ಧೈರ್ಯ ಸ್ಥೈರ್ಯ ಸತ್ಯಕಾಮ ಸತ್ಯಸಂಕಲ್ಪಾದ್ಯನಂತ ಕಲ್ಯಾಣಗುಣಗಣಾಕಾರಾ! ಭಕ್ತಜನ ಮನೋಮಂದಿರ–ವಿಹಾರ! ನನ್ನನ್ನು ಕಾಯಲು ಬಂದೆಯಾ ತಂದೆ! ಬಾ ನನ್ನ ಮುದ್ದಿನದೊರೆ! ಧನ್ಯನಾದೆ! ನಾ ಇಂದು ಧನ್ಯ ನಾದೆ! ಉನ್ನತ ಮಹಿಮ! ಪಾವನ್ನ ಚರಿತ! ಸುರಸನ್ನುತ ಚರಣ। ಪುರುಷರನ್ನ! ಭಾನುಕೋಟಿ ಪ್ರಭಾ! ಸ್ವಾನಂದ ಪೂರ್ಣಾ! ರಂಗಾ! ನಿನ್ನ ಮುದ್ದು ಮಂಗಳ ವಿಗ್ರಹವನ್ನು ಕಂಡು ಇಂದು ನಾ ಧನ್ಯನಾದೆ!

### ಉಗಾಭೋಗ

ಇಂದಿನ ದಿನವೇ ಶುಭದಿನವು ಇಂದಿನವಾರ
ಶುಭವಾರ ಇಂದಿನತಾರೆ ಶುಭತಾರೆ
ಇಂದಿನಯೋಗ ಶುಭಯೋಗ ಇಂದಿನ ಕರಣ

ಶುಭಕರಣ ಇಂದು ಶ್ರೀಪುರಂದರ ವಿಠಲನ
ದರುಶನವೇ ಸಂದರುಶನವು ಸರಸ್ವತೀ, ವರದಾ,
ಇಂದು ಶ್ರೀಪುರಂದರ ವಿಠಲನ ದರುಶನವೇ ಸಂದರುಶನವು

ಕೃಷ್ಣ — ದಾಸರೇ, ಅಂದು ಬೆಟ್ಟದ ಮೇಲೆ ನನ್ನ ತಲಗೆ ಪೆಟ್ಟನ್ನು ಹಾಕಿದ ಅಪರಾಧಕ್ಕೆ ಶಿಕ್ಷೆಯಾವುದು ಎಂದು ಕೇಳಿದಿರಲ್ಲಾ? ಇದೋ ಆ ಅಪರಾದಕ್ಕೆ ನಾ ವಿಧಿಸಿದ ಶಿಕ್ಷೆ. ಸಾಕೇ? ಇದರಿಂದ ನಿಮ್ಮ ದುಃಖಪ್ರಾರಬ್ಧ ಸವೆಯಿತು; ಇಂದಿಗೆ ನಿಮ್ಮ ಬಂಧನ ಕಡೆಯಿತು.

ರು — ( ಆನಂದದಿಂದ ) ದೇವಾ ! ಈರೀತಿ ಮುಯ್ಯಕ್ಕೆ ಮುಯ್ಯ ತೀರಿಸಿಕೊಂಡೆಯಾ !

ರಾಗ – ಪೂರ್ವಿ ತಾಳ – ಅಟ್ಟ

ಮುಯ್ಯಕ್ಕೆ ಮುಯ್ಯ ತೀರಿತೋ ಜಗ
ದಯ್ಯ ಎನ್ನಯ್ಯ ಕಾಯಯ್ಯ ಪಂಢರಿರಾಯ ॥ ಪ ॥

ಸಣ್ಣವನೆಂದು ನಾ ನೀರು ತಾರೆಂದರೆ
ಎನ್ನ ವಂಚಿಸಿ ನೀನು ರಾತ್ರಿಯಲ್ಲಿ
ಚಿನ್ನದ ಕಲಶದಿ ಜಲ ತಂದು ಕೊಟ್ಟರೆ
ನಿನ್ನಂದು ಕುಕ್ಕಿದಕ್ಕೀಗ ಪಂಢರಿರಾಯ ॥ 1 ॥

ಶ್ರೀಲೋಲ ನಿನ್ನ ಮಹಿಮೆ ಎಷ್ಟೆಂದು ಹೇಳಲಿ
ಕಾಲಸಾಧಿಸಿ ಎನ್ನ ರೂಪತಾಳಿ
ಸೂಳೆಗೆ ಕಂಕಣ ಕೊಟ್ಟು ತೋರಿದೆ – ನರ–
ಲೀಲೆಯ ಸೈ ಸೈ ಯ್ಯ ದೇವ ಪಂಢರಿರಾಯ ॥ 2 ॥

ಸಕಲ ಜನರು ನೋಡೆ ಮಾನಭಂಗವು ಮಾಡಿ
ಭಕುತ ವತ್ಸಲನೆಂಬ ಬಿರುದೆತ್ತಿದಿ
ಯುಕುತಿಯಲಿ ನಿನಗೆಣೆಗಾಣೆ ಜಗದೊಳು
ಅಕಳಂಕ ಪುರಂದರ ವಿಠಲ ಪಂಢರಿರಾಯ ॥ 3 ॥

ಶ್ರೀಹರಿ ! ಈ ದೇಹ ನಿನ್ನದು ! ನೀಕೊಟ್ಟ, ಈ ದೇಹ ನಿನ್ನಿಂದ ದಂಡಿಸಲರ್ಹವಾದುದು ! ನನ್ನ ಸರಸ್ವವೂ ನಿನ್ನಧೀನ !

( ಎಂದು ಹೇಳಿ ಸರಸ್ವತಿ ವರದನ ಕಡೆ ನೋಡುತ್ತಾ ) ಸರಸ್ವತೀ, ವರದಾ, ಬನ್ನಿ, ಮುದ್ದು ಸ್ವಾಮಿಯನ್ನು ಮನಸಾರ ಸೇವಿಸೋಣ !

( ದಾಸರ ವಾಕ್ಯದಿಂದ ಎಚ್ಚೆತ್ತ ಸರಸ್ವತಿ, ಆ ಭುವನೈಕ ಸುಂದರ ಮೂರ್ತಿಯನ್ನು ನೋಡುತ್ತಾ, ಯಾಂತ್ರಿಕವಾಗಿ ಪಕ್ಕದಲ್ಲಿ ಇಷ್ಟಕ್ಕೆ ಮುಂಚೆ ಪೂಜಾರಿಗಳು ತಂದು ಇಟ್ಟ ತಟ್ಟೆಯಲ್ಲಿರುವ ಪೂಜಾಸಾಮಗ್ರಿಯನ್ನು ಕೆಳಗಿಟ್ಟು, ತಟ್ಟೆಯನ್ನು ದಾಸರಕೈಗೆ ಕೊಡುವಳು. ದಾಸರು ಆ ತಟ್ಟೆಯನ್ನು ಒಂದು ಕಡೆ ಇಟ್ಟು, ಸ್ವಾಮಿಯನ್ನು ಅದರಲ್ಲಿ ಬಂದು ನಿಲ್ಲಲು ಪ್ರಾರ್ಥಿಸುವರು. ಸ್ವಾಮಿ ಮುದ್ದು ಮುದ್ದಾಗಿ ನಡೆಯುತ್ತಾ ಬಂದು ತಟ್ಟೆಯಲ್ಲಿ ಕಾಲಿಟ್ಟು ನಿಲ್ಲುವನು. ವರದನು ನೀರಿನ ತಂಬಿಗೆ

ಯನ್ನು ತಾಯಿಗೆ ಕೊಡುವನು. ಪುರಂದರದಾಸರು ಸ್ವಾಮಿಯ ಪಾದದ ಬಳಿ ಕುಳಿತು ಸರಸ್ವತಿಗೆ ನೀರು ಹಾಕೆಂದು ಸಂಜ್ಞೆ ಮಾಡುವರು. ಸರಸ್ವತಿಬಾಯಿಯವರು ನೀರು ಹಾಕಲು ಹೋಗಲು, ಪುನಃ ಮತ್ತೆ ಆಕೆಯನ್ನು ತಡೆಯುತ್ತಾ. )

ರು – ಗಂಗಾ ಜನಕಾ !

ಮಂಗಳಭಿಷೇಕಕ್ಕೆ ಉದಕ ತರುವೆನೆನೆ
ಗಂಗೆಯಂಗುಷ್ಠದಿ ಪಡೆದಿರುವೆ.

ಸಂಗೀತ ಕೀರ್ತನೆ ಪಾಡುವೆನೆಂದರೆ
ತುಂಬುರು ನಾರದರು ಪಾಡುತಿಹರೋ ದೇವ.
ಹೀಗಿರಲು, ಹೇಗೆ ಅರ್ಚಿಸಲಿ ! ಹೇಗೆ ಮೆಚ್ಚಿಸಲಿ !
ನಾಗಶಯನನೆ ! ನಾರದವಂದ್ಯನೆ ! ಗಂಗೋತ್ಪ
ತ್ತಿಗೆ ಕಾರಣನಾದ ಈ ನಿನ್ನ ಅಪ್ರಾಕೃತಪಾದ
ಗಳಿಗೆ ಈ ಪ್ರಾಕೃತ ನೀರು ಎಂತು ಸಂಹೋಗುವುದು.

( ಪುನಃ ಹಿಂದಿನಂತೆ ಸರಸ್ವತಿಗೆ ಹೂಗಳನ್ನು ಕೊಡು ಎಂದು ಸಂಜ್ಞೆಯ ಮಾಡುವರು. ಸರಸ್ವತೀಬಾಯಿಯವರು ಪತಿಯ ಆಜ್ಞೆಯಂತೆ ಹೂಗಳನ್ನು ದಾಸರ ಕೈಗೆ ಕೊಡುವರು. ದಾಸರು ಹೂಗಳನ್ನು ಕೃಷ್ಣನ ಕಾಲುಗಳಿಗೆ ಹಾಕಲು ಹೋಗಿ, ಮತ್ತೆ ಅಷ್ಟರಲ್ಲಿ ನಿಂತು, . . . . )

ಪದ್ಯಗಾಥಾ . . .

“ ಪುಷ್ಪವ ತಂದು ನಿನಗರ್ಪಿಸುವೆನೆನೆ
ಪುಷ್ಪಪಲ್ಲವಿಸಿದೆ ಪೊಕ್ಕಳಲ್ಲಿ
ಇಪ್ಪತ್ತೆತ್ತೀಸ ಕೋಟಿ ದೇವರ್ಕಳಲಿ ಒಬ್ಬ
ಒಪ್ಪಿನೈವೇದ್ಯ ನೀಡಲು ತೃಪ್ತನಾಗುವೆಯೋ ॥ ”

ಭೂರೂಪವಾದ ಹದಿನಾಲ್ಕುದಳಗುಳ್ಳ ಅಪೂರ್ವವಾದ ಸುವರ್ಣಮಯ ಕಮಲವನ್ನೇ ನಿನ್ನ ನಾಭಿಯಿಂದ ಪಡೆದೆ ! ಈ ಹೂವು ನಿನಗೆಂತೋ ! ನಿತ್ಯತೃಪ್ತ ! ಏನು ಕೊಟ್ಟು ಮೆಚ್ಚಿಸಲಿ? ಭಕ್ತಬಂಧೂ ! ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ! ಎಂಬ ನಿನ್ನ ವಾಕ್ಯವೇ ನನಗೆ ತಾರಕ !

“ ನಿತ್ಯಗುಣಾರ್ಣವ ನಿಜಗುಣ ಪರಿಪೂರ್ಣ
ಸಚ್ಚಿದಾನಂದ ಶ್ರೀ ಸನಕಾದಿ ವಂದ್ಯ
ಮುಕ್ತಿದಾಯಕ ನಮ್ಮ ಪುರಂದರ ವಿಠಲ
ಭಕ್ತಿದಾಯಕನೆಂದು ಸ್ತುತಿಸಿಕೊಂಡಾಡುವೆ ॥ ”

ನಿನ್ನನ್ನು ಸ್ತುತಿಸಿಕೊಂಡಾಡುವುದಕ್ಕಿಂತ ಮತ್ತೇನು ಮಾಡ ಬಲ್ಲೆ !

ಕೃಷ್ಣ – ದಾಸರೇ, ಭಕ್ತಿಯಿಂದ ನೀವು ಏನು ಕೊಟ್ಟರೂ ತೆಗೆದು ಕೊಳ್ಳು ತ್ತೇನೆ. ನನಗೆ ಅದು ಇದು ಎಂದು ಯಾವುದೂ ಇಲ್ಲ. ನಿಮ್ಮ ಆಪೇಕ್ಷೆಯೇ ನನ್ನ ಆಪೇಕ್ಷೆ.

ದಾಸರು – ಆಹಾ ! ಆಹಾ ! ಪ್ರಭೂ ! ಎಷ್ಟುದಯಾಮಯ ನೀನು !

( ಸರಸ್ವತೀಬಾಯಿಯವರು ತಂಬಿಗೆಯಿಂದ ನೀರು ಹಾಕುವರು. ದಾಸರು ಕೃಷ್ಣನ ಕಾಲನ್ನು ತೊಳೆಯುವರು. ಹೂಗಳನ್ನು ಹಾಕುವರು. ಹಣ್ಣನ್ನು ತಿನಿಸುವರು. ಆನಂದದಿಂದ ನೋಡುತ್ತಾ ನಿಲ್ಲುವರು. ಈ ಸಂದರ್ಭದಲ್ಲಿ ಹಿನ್ನೆಲೆಯಿಂದ ವೇದಘೋಷ ಕೇಳಿಸುವುದು. )

( ಹಿನ್ನೆಲೆಯಿಂದ )

(ವೇದಮಂತ್ರ ನಾರಾಯಣೋಪನಿಷತ್)
"ಅಥ ಪುರುಷೋಹವೈ ನಾರಾಯಣೋಽಕಾಮಯತ ಪ್ರಜಾ :
ಸೃಜೇಯೇತಿ । ನಾರಾಯಣಾತ್ಪ್ರಾಣೋ ಜಾಯತೆ ।
ಮನಃ ಸರ್ವೇಂದ್ರಿಯಾಣಿ ಚ । ನಾರಾಯಣಾದ್ಬ್ರಹ್ಮಾ.

ಜಾಯತೇ । ನಾರಾಯಣಾದ್ರುದ್ರೋ ಜಾಯತೇ ।
ನಾರಾಯಣಾ
ದಿಂದ್ರೋ ಜಾಯತೇ । ನಾರಾಯಣಾತ್ಪ್ರಜಾಪತಯಃ
ಪ್ರಜಾಯಂತೇ
ನಾರಾಯಣಾದ್ದ್ವಾದಶಾದಿತ್ಯಾ ರುದ್ರಾ ವಸವಃ ಸರ್ವಾ
ಣಿ ಛಂದಾಗುಂಸಿ ॥ ನಾರಾಯಣಾದೇವ ಸಮುತ್ಪದ್ಯಂತೆ !

ನಾರಾಯಣೇ ಪ್ರವರ್ತಂತೆ । ನಾರಾಯಣೇ ಪ್ರಲೀಯಂತೆ.
ಅಥನಿತ್ಯೋ ನಾರಾಯಣಃ । ಬ್ರಹ್ಮಾನಾರಾಯಣಃ । ಶಿವಶ್ಚ
ನಾರಾಯಣಃ। ಶಕ್ರಶ್ಚನಾರಾಯಣಃ। ನಾರಾಯಣ ಏವೇದಗುಂ
ಸರ್ವಂ । ಯದ್ಭೂತಂ ಯಚ್ಚ ಭವ್ಯಂ । ನಿಷ್ಕಲೋ

ನಿರಂಜನೋ ನಿರ್ವಿಕಲ್ಪೋ ನಿರಾಖ್ಯಾತೋ ಶುದ್ಧೋ ದೇವ
ಏಕೋ ನಾರಾಯಣಃ ನ ದ್ವಿತೀಯೋಸ್ತಿ ಕಶ್ಚಿತ್ ಯ ಏ
ವಂ ವೇದ। ಇತ್ಯುಪನಿಷತ್ ಓಂ ಶಾಂತಿಃ ಶಾಂತಿಃ ಶಾಂತಿಃ
ಹರಿಃ ಓಂ "

( ಇಲ್ಲಿ ಪುರುಷಸೂಕ್ತವನ್ನಾದರೂ ಹೇಳಬಹುದು. )

ಕೃಷ್ಣ – ದಾಸರೇ ಪ್ರೀತನಾದೆ ! ನಾನು ಎಂದಿಗೂ ನಿಮ್ಮವನೇ ! " ವೈಕುಂಠಂವಾ ಪರಿತ್ಯಕ್ಷೇ ನಭಕ್ತಾನ್‍ತ್ಯಕ್ತುಮುತ್ಸಹೆ " ! ವೈಕುಂಠವನ್ನಾದರೂ ಬಿಡುವೆನು. ನಿಮ್ಮನ್ನಗಲಿ ಒಂದರಘಳಿಗೆ ಇರಲಾರೆ. ನಿಮ್ಮ ಆನಂದವೇ ನನ್ನ ಆನಂದ ! ನಿಮ್ಮ ಮನೋ ಬಯಕೆಯನ್ನು ಈಡೇರಿಸಲು ಸದಾಸನ್ನದ್ಧನಾಗಿದ್ದೇನೆ ! ವರಕೇಳಿ. . . . .

ದಾಸರು – ದೇವ ! ದೇವ ! ನಿನ್ನ ನಯನಾನಂದಕರವಾದ ಸುಂದರ ಮಂಗಳ ವಿಗ್ರಹವನ್ನು ಕಂಗಳಿಂದ ನೋಡುತ್ತಾ ಆನಂದಿಸುವುದಕ್ಕಿಂತ ಮಿಗಿಲಾದ ಮತ್ತೊಂದು ಬಯಕೆಯೇ ! ವರಕೊಡುವ ಸ್ವಾಮಿ ನೀನಲ್ಲ ! ವರಕೇಳ್ವ ಭೃತ್ಯನು ನಾನಲ್ಲ ! ಲೋಕಕ್ಕೆ ಮಂಗಳ ವನ್ನುಂಟು ಮಾಡಿ, ನಿನ್ನಲ್ಲಿ ಅವಿಚ್ಛಿನ್ನವಾದ ಭಕ್ತಿಯನ್ನು ಮಾತ್ರಕೊಡು !

ಕೃಷ್ಣ – ತಥಾಸ್ತು. ದಾಸರೇ, ಇನ್ನು " ದಾಸರೆಂದರೆ ಪುರಂದರ ದಾಸರಯ್ಯ " ಎಂದು ನಿಮ್ಮ ಚರಿತ್ರೆ ಲೋಕಕ್ಕೆ ಆದರ್ಶಪ್ರಾಯವಾಗಿ, ಭಕ್ತಜನ ಮನೋ ಮಂದಿರಗಳಲ್ಲಾ ವಾಸ ವೇರ್ಪಡಿಸಿಕೊಂಡು, ಪಾಪಹಾರಕವಾಗಿ, ಪುಣ್ಯವರ್ಧಕವಾಗಿ, ಚಿರಸ್ಥಾಯಿಯಾಗುವುದು !

ದಾಸರು – ಧನ್ಯ ಪ್ರಭೋ, ಧನ್ಯ ! . . . . .

( ದಾಸರು, ಸರಸ್ವತಿಬಾಯಿ, ವರದ ಮೂವರು ಪರವಶದಿಂದ ಸ್ವಾಮಿಯ ಸುತ್ತಲೂ ತಿರುಗುತ್ತಾ ಕುಣಿಯುವರು. ಸ್ವಾಮಿ ಸಹ ಪರವಶನಾಗಿ ಕುಣಿಯುವನು. )

ವಿಠಲ ಸಲಹೋ ಸ್ವಾಮಿ ನಮ್ಮನು
ವಿಠಲ ಜಗದಂತರ್ಯಾಮಿ ॥

ಎಡಕೆ ವಿಠಲ ಬಲಕೆ ವಿಠಲ
ಎಡಕೆ ಬಲಕೆ ವಿಠಲಾ ॥

ಬಂಧು ವಿಠಲ ಬಳಗ ವಿಠಲ
ಬಂಧು ಬಳಗ ವಿಠಲಾ ॥

ತಂದೆ ವಿಠಲ ತಾಯಿ ವಿಠಲ
ತಂದೆ ತಾಯಿ ಪುರಂದರ ವಿಠಲ
ವಿಠಲ – ವಿಠಲ – ವಿಠಲ – ವಿಠಲ
ಜೈ ಜೈ ವಿಠಲ ಜೈ ಜೈ ವಿಠಲ

ಭಕ್ತ ಪುರಂದರದಾಸರು (ನಾಟಕ)

ಪಾಂಡುರಂಗ ವಿಠಲ ಪಾಂಡುರಂಗ ವಿಠಲ
ಪಾಂಡುರಂಗ ವಿಠಲ ಪಾಂಡುರಂಗ ವಿಠಲ
ಪಂಢರಿನಾಥ ವಿಠಲ ಪಂಢರಿನಾಥ ವಿಠಲ
ವಿಠಲ ವಿಠಲ ವಿಠಲ ವಿಠಲ ವಿಠಲ
ಜೈಜೈ ವಿಠಲ ಜೈಜೈವಿಠಲ
ವಿಠಲ ಸಲಹೋ ಸ್ವಾಮಿ ನಮ್ಮನು
ವಿಠಲ ಜಗದಂತರ್ಯಾಮಿ – – – –

( ಎಂದು ತಿರುಗುತ್ತಾ ಕುಣಿಯುವರು. )

ಈ ರೀತಿ ಆನಂದದಿಂದ ದಾಸರು ಕುಣಿಯುತ್ತಿರಲು ಪುಷ್ಪ ವೃಷ್ಟಿಯಾಗುವುದು. ದಾಸರ ಹಾಡಿನ ಶಬ್ದ ಮೆಲ್ಲಗೆ ಕಮ್ಮಿಯಾಗುವುದು. ಇದೇ ಸಂದರ್ಭದಲ್ಲಿ "ದಾಸರೆಂದರೆ ಪುರಂದರ ದಾಸರಯ್ಯ" ಎಂಬ ಹಾಡು ಹಿನ್ನೆಲೆಯಿಂದ ಕೇಳಿಸುವುದು. ಹಾಡು ಮುಗಿಯುತ್ತಾ ಇರಲು ಮೆಲ್ಲಗೆ ತೆರೆ ಬೀಳುವುದು.

ದಾಸರೆಂದರೆ ಪುರಂದರ ದಾಸರಯ್ಯ
ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ ॥ ಪ ॥
ನೀತಿಯುಳ್ಳವನರಿತು ನಿಗಮವೇದ್ಯನ ನಿತ್ಯ
ಮಾತು ಮಾತಿಗೆ ಬಿಡದೆ ವರ್ಣಿಸುತ
ಗೀತ ನರ್ತನದಿಂದ ಕೃಷ್ಣನ್ನ ಪೂಜಿಸುವ
ಪೂತಾತ್ಮ ಪುರಂದರ ದಾಸರಿವರಯ್ಯ ॥

( ಮೆಲ್ಲನೆ ತೆರೆ ಬೀಳುವುದು )

ನಾಟಕ ಸಮಾಪ್ತವಾಯಿತು

ಮಧ್ವೇಶಾರ್ಪಣಮಸ್ತು

ಅಸ್ಮದ್ಗುರು ಗುರುಜಗನ್ನಾಥದಾಸಾಂತರ್ಗತ, ಜಗನ್ನಾಥ
ದಾಸಾಂತರ್ಗತ, ವಿಜಯದಾಸಾಂತರ್ಗತ, ಪುರಂದರ
ದಾಸಾಂತರ್ಗತ ರಾಘವೇಂದ್ರಾಂತರ್ಗತ ಶ್ರೀ
ಭಾರತೀರಮಣ ಮಧ್ವಾಭಿನ್ನ ಮುಖ್ಯ
ಪ್ರಾಣಾಂತರ್ಗತ ರಾಮ ನರಹರಿ
ಕೃಷ್ಣ ಹಯವದನಾಭಿನ್ನ ಶ್ರೀ
ಶ್ರೀನಿವಾಸಾರ್ಪಣಮಸ್ತು
ಕೃಷ್ಣಾರ್ಪಣಮಸ್ತು

— —

